# ಶೂದ್ರ

ಬೆಲೆ: 2 ರೂ.

ಎಲ್ಲೋ ಹುಡುಕಿದೆ ಇಲ್ಲದ ದೇವರ
ಕಲ್ಲು ಮಣ್ಣುಗಳ ಗುಡಿಯೊಳಗೆ
ಇಲ್ಲೇ ಇರುವ ಪ್ರೀತಿ – ಸ್ನೇಹಗಳ
ಗುರುತಿಸದಾದೆನು ನಮ್ಮೊಳಗೆ

—ಜಿ. ಎಸ್. ಶಿವರುದ್ರಪ್ಪ



ಪುಷ್ಪಮಾಲಾ : ಕಲೆ ನನಗೆ ಕೊಟ್ಟ ಥ್ರಿಲ್ಲಿಂಗ್

ಜಿ.ಎಸ್.ಎಸ್. : ನನ್ನ ಅರವತ್ತು ವರ್ಷಗಳ ಬದುಕು.

'ಮುಕ್ತ' ಚರ್ಚೆಗಾಗಿ 'ಶೂದ್ರ' ತಿಂಗಳ ಪತ್ರಿಕೆ

ಸಂಚಿಕೆ : 9–10 ಜೂನ್–ಜುಲೈ 1986 ಸಂಪುಟ : 12

ಸಹಾಯಕ ಸಂಪಾದಕರು : ನಿರ್ಮಲಾರೆಡ್ಡಿ – ಆನಂದ ಮೂರ್ತಿ — ಮಹೇಶ್

ಶೂದ್ರ ಬರದಿದ್ದರೆ ಪತ್ರ ಬರೆಯಿರಿ, ಚಂದಾ ಕಳಿಸಿ. ಲೇಖನ ಕಳಿಸುವಾಗ 15 ಪೈಸೆಯ ರಿಪ್ಲೈ ಕಾರ್ಡಿಡಿ.

ವಾರ್ಷಿಕ ಚಂದಾ : 22 ರೂ. ಅಜೀವ ಚಂದಾ : 250 ರೂ. (ಐದು ಕಂತುಗಳಲ್ಲಿ)

ಶೂದ್ರ ಶ್ರೀನಿವಾಸ್, ಸುದ್ದುಗುಂಟೇಪಾಳ್ಯ, ಡಿ. ಆರ್. ಕಾಲೇಜು ಅಂಚೆ,
ಬೆಂಗಳೂರು–560 029

"ಕನಸಿಗೊಂದು ಕಣ್ಣು" ಪುಸ್ತಕರೂಪದಲ್ಲಿ ಬಂದಿದೆ. ಶೂದ್ರದ ಚಂದಾದಾರರಿಗೆ 10 ರೂಗಳು.



ಲಂಕೇಶ್‌ರವರ ಬಗ್ಗೆ ವಿಚಾರ ಸಂಕಿರಣದ ವಿವರ : ರಕ್ಷಾಪುಟ ಮೂರರಲ್ಲಿ.

# ಶಂ.ಬಾ. ಅವರ ಸಾಂಸ್ಕೃತಿಕ ಅಧ್ಯಯನ: ಒಂದು ಪರಿಚಯ

—ರಾಜೇಂದ್ರ ಚೆನ್ನಿ

"ಇಂದು ಎಂಬುದು ಆಕಾರ ಪಡೆಯಲು ನಿನ್ನೆಗಳು ಕಾರಣವಾಗುತ್ತವೆ, ಪ್ರಾಮುಖ್ಯವಾಗಿ ನಿನ್ನೆಯು ಪೂರಾ ಮರೆತರೆ 'ಇಂದು' ಅರ್ಥಶೂನ್ಯವಾಗುತ್ತದೆ. ತನ್ನ ಹಾಗೂ ತನ್ನ ಸಂಸ್ಕೃತಿಯ 'ನಿನ್ನೆ'ಗಳನ್ನು ಅರಿಯದವರಿಗೆ ಇಂದಿನ ರೂಪ-ಆಕೃತಿಯು ಅರ್ಥವಾಗಲು ಶಕ್ಯವಿಲ್ಲ. ಯಾವುದೇ 'ಅರ್ಥ' ಎಂಬುದು ನಿನ್ನೆಗಳ ಫಲತ ಬಾಳನ್ನು ಅರ್ಥಶೂನ್ಯವಾಗಿಸಿಕೊಳ್ಳಬೇಕಿದ್ದರೆ 'ನಿನ್ನೆಗಳನ್ನು' ಎಂದರೆ ಇತಿಹಾಸವನ್ನು ಮರೆತು ಬಿಡುವುದೊಂದೇ ಮಾರ್ಗ...(ಋಗ್ವೇದ ಸಾರ...).

ನಮ್ಮ ಸಂಸ್ಕೃತಿಯ ಹಾಲಿ ಸ್ಥಿತಿಯಲ್ಲಿ ನಿನ್ನೆಗಳನ್ನು ಅರಿತುಕೊಳ್ಳುವ ಪ್ರಯತ್ನ ನೈತಿಕ ಎದೆಗಾರಿಕೆಯ ಕೆಲಸವಾಗಿದೆ. ತಿಳಿದುಕೊಳ್ಳಬೇಕೆನ್ನುವ ಕುತೂಹಲವಾಗಲಿ, ತಿಳಿದುಕೊಳ್ಳಲು ಬೇಕಾದ ಜಾಣ್ಮೆಯಾಗಲಿ ಈ ಕೆಲಸದಲ್ಲಿ ಸಾಕಾಗಲಾರವು. ಮುಖ್ಯವಾಗಿ ಬೇಕಾದದ್ದು ನಮ್ಮ ಸಂಸ್ಕೃತಿಯ ಕ್ರೂರ ವಾಸ್ತವಗಳನ್ನು ಯಾವದೇ ಹಳವಂಡವಾಗಲಿ, ಭಾವುಕ ಕನಸುಗಾರಿಕೆಯಾಗಲಿ ಅಥವಾ ಆದರ್ಶೀಕರಣದ ತೆವಲಾಗಲಿ— ಇವೆಲ್ಲವನ್ನು ಬಿಟ್ಟುಕೊಟ್ಟು ಗ್ರಹಿಸಲು ಅವಶ್ಯಕವಾದ ಒಂದು ತೀವ್ರ ನೈತಿಕ ನಿಷ್ಠೆ. ನಮ್ಮ ಸಂಸ್ಕೃತಿಯ ಬಗ್ಗೆ ನಮ್ಮಲ್ಲಿರುವ ಭ್ರಮೆಗಳನ್ನು ಕಳಚಿ ನಿಂತಾಗ ಅನ್ನಿಸುವ ಆತಂಕ. ದಿಗ್ಭ್ರಮೆ ಮತ್ತು ತಬ್ಬಲಿತನದ ಹತಾಶಭಾವನೆಗಳನ್ನು ದಾಟಿ ಸತ್ಯದ ಎದುರಿನಲ್ಲಿ ಬೆತ್ತಲಾಗಿ ನಿಲ್ಲಬೇಕಾಗುತ್ತದೆ. ಸಾವಿರಾರು ವರ್ಷಗಳ ಪರಂಪರೆಯ ಬಗ್ಗೆ ನಮ್ಮಲ್ಲಿರುವ ಎಲ್ಲ ಗ್ರಹಿಕೆಗಳನ್ನು ಬಿಟ್ಟುಕೊಟ್ಟು ನಮ್ಮ ಬದುಕನ್ನು ಮೊದಲ ಸಾರಿ ಎನ್ನುವಂತೆ ನೋಡಬೇಕಾಗುತ್ತದೆ. ಕೆಡುಕಿನ ಬಗ್ಗೆ ಸ್ಪಷ್ಟವಾದ ಕಲ್ಪನೆಯಿಲ್ಲದ ನಮ್ಮ ಚಿಂತನೆಯ ಪರಂಪರೆಯಿಂದಾಗಿ ಒಂದು ಖಚಿತವಾದ ನೈತಿಕ ನಿಲುವಿನ ಸಹಾಯದಿಂದ ವಾಸ್ತವವನ್ನು ಅರ್ಥ ಮಾಡಿಕೊಳ್ಳುವ ಧೀಮಂತಿಕೆ ನಮ್ಮಲ್ಲಿಲ್ಲ. ಈ ಮಾತನ್ನು ಯಾಕೆ ಹೇಳಬೇಕಾಗಿದೆಯೆಂದರೆ ನಮ್ಮಲ್ಲಿ ಇತಿಹಾಸದ ಪ್ರಜ್ಞೆಯಿಲ್ಲ ಎನ್ನುವದನ್ನು ಹೇಳಿಬಿಡುತ್ತೇವೆ. ಆದರೆ ಇತಿಹಾಸವನ್ನು ಅರ್ಥ ಮಾಡಿಕೊಳ್ಳಬೇಕಾದರೆ ನಮ್ಮ

ರಾಜೇಂದ್ರ ಚೆನ್ನಿ, ರಂಗನಾಥ ಬಿಲ್ಡಿಂಗ್, ವಿದ್ಯಾನಗರ, ಎರಡನೇಕ್ರಾಸ್, ಶಿವಮೊಗ್ಗ

ಇಂದಿನ ಬದುಕನ್ನು, ಅದರ ಎಲ್ಲ ಕಟು ವಾಸ್ತವಗಳನ್ನು ಪೂರ್ತಿಯಾಗಿ ಅರ್ಥಮಾಡಿಕೊಂಡು ಅನಂತರ ಇಂದಿನ ರೋಗಗಳ ಮೂಲಗಳನ್ನು ನಿನ್ನೆಗಳಲ್ಲಿ ಹುಡುಕಬೇಕಾಗುತ್ತದೆ ಎನ್ನುವ ಸತ್ಯವನ್ನು ಮರೆತುಬಿಡುತ್ತೇವೆ. ಇತಿಹಾಸ ನಿನ್ನೆಗಳ ಬಗ್ಗೆ ಇರುತ್ತದೆಯಾದರೂ ಅದು ಹುಟ್ಟುವದು ಇಂದಿನಲ್ಲಿ. ಇಂದಿನ ಬದುಕನ್ನು ಪೂರ್ತಿಯಾಗಿ ಎದುರಿಸುವ ನಿಷ್ಠೆಯಿಲ್ಲದಿದ್ದರಿಂದ ಅದರ ಬಗ್ಗೆ ಸುಲಭವಾದ ಭ್ರಮೆಗಳನ್ನು ಕಟ್ಟಿಕೊಂಡು ಈ ಭ್ರಮೆಗಳ ಬೆಂಬಲಕ್ಕಾಗಿ ಇತಿಹಾಸವನ್ನು ತಿರುಚುವುದು ನಮಗೆಲ್ಲ ಒಂದು ಉಪಾಯವಾಗಿ ಬಿಟ್ಟಿದೆ. ಆದ್ದರಿಂದ ಇತಿಹಾಸದ ಪ್ರಜ್ಞೆಯ ಕೊರತೆಯ ಬಗ್ಗೆ ಮಾತನಾಡುವ ಮೊದಲು ನಮ್ಮ ಸಾಹಿತ್ಯ ಮತ್ತು ಚಿಂತನೆ ವಾಸ್ತವವನ್ನು ಎಷ್ಟರ ಮಟ್ಟಿಗೆ ಇಡಿಯಾಗಿ ದಾಖಲಿಸಿದೆ ಎನ್ನುವ ಪ್ರಶ್ನೆಯನ್ನು ಕೇಳಿಕೊಳ್ಳಬೇಕಾಗಿದೆ. ಈ ದೃಷ್ಟಿಯಿಂದ ನೋಡಿದಾಗ ನಮ್ಮ ಬರಹಗಾರರಲ್ಲಿ ಹೆಚ್ಚಿನವರು ಹಸುಳೆ ಕಂದಮ್ಮಗಳು. ನೆತ್ತಿ ಇನ್ನು ಗಟ್ಟಿಯಾಗದ ಕೂಸುಗಳು. ಹೊರ ಜಗತ್ತಿನ ಓರೆ, ಕೋರೆಗಳು ಚುಚ್ಚುವದರಿಂದ ತಾಯಿಯ ಬೆಚ್ಚನೆಯ, ಗರ್ಭಕ್ಕೆ ವಾಪಸ್ಸು ಹೋಗಬೇಕೆನ್ನುವ ಹಂಬಲ ಜೀವನದಿಂದ ವಿಮುಖವಾಗಿಸುವ ಮೃತ್ಯು ಪ್ರವೃತ್ತಿಯ ರೂಪವೆಂದು ಮನಃಶಾಸ್ತ್ರಜ್ಞರು ಹೇಳುತ್ತಾರೆ. ನಮ್ಮ ಬರಹಗಾರರ ಮತ್ತು ಸಂಸ್ಕೃತಿಯ ಮಧ್ಯದ ಸಂಬಂಧ ಇಂಥ ಹಂಬಲದಿಂದ ಪ್ರೇರಿತವಾಗಿದೆಯೆನ್ನಬಹುದು. ನಮ್ಮ ಬದುಕಿನ ಸತ್ಯಗಳನ್ನು ಎದುರಿಸಲಾಗದೆ ಸಂಸ್ಕೃತಿಯ ಗರ್ಭವನ್ನು ಹೋಗುವ ಉಪಾಯಗಳಿಂದ ಇವರು ಮುಕ್ತರಾಗಿಲ್ಲ. ಮನುಷ್ಯನ ಇಲ್ಲಿಯ ಬದುಕಿನ ಎಲ್ಲ ಮೂಲಗಳನ್ನು ಮತ್ತು ಅವನ ಮೌಲ್ಯಗಳ ಪ್ರಪಂಚವನ್ನು ನಮ್ಮ ಸಂಸ್ಕೃತಿ ನಿರ್ಮಿಸಿದ ನೋಡುವ ಬಗೆಗಳಿಂದ ಹೊರಗೆ ಬಂದು ವಸ್ತುನಿಷ್ಠವಾಗಿ ದಾಖಲೆ ಮಾಡಿದ ಬರಹಗಾರರು ಇಲ್ಲವೆಂದೆ ಹೇಳಬಹುದು. ಬದುಕಿನ ವಿಷಮತೆಗಳ ಮತ್ತು ಸಾಮಾಜಿಕ ಅನ್ಯಾಯಗಳ ವಿಮರ್ಶೆ ನಡೆದಿಲ್ಲವೆಂದಲ್ಲ. ಆದರೆ ಇಂಥ ವಿಮರ್ಶೆಯ ಹಿಂದೆ ಪ್ರಜ್ಞೆಯ ಆಳದಲ್ಲೆಲ್ಲೊ ಕೆಲಸ ಮಾಡುತ್ತಿರುವ ಸಂಸ್ಕೃತಿಯೊಂದಿಗೆ ರಾಜಿ ಮಾಡಿಕೊಳ್ಳುವ ಮನೋಭಾವ ಇದ್ದೇ ಇದೆ. ಪುರಾಣ ಹಾಗೂ ಸ್ಮೃತಿಗಳ ನಂತರದ ಸಾಂಸ್ಕೃತಿಕ ಅಧಃಪತನವನ್ನು ವಿರೋಧಿಸುವ ಜೊತೆಗೆ ಆರೋಗ್ಯಕರ ಸಂಸ್ಕೃತಿಯನ್ನು, ಮಾನವೀಯ ಮೌಲ್ಯಗಳನ್ನು ವೇದಗಳಲ್ಲಿ ಭ್ರಮಿಸುವ ಮನೋಭಾವವಂತೂ ಸಾಮಾನ್ಯವಾದುದು. ಅದಕ್ಕಿಂತಲೂ ಹೆಚ್ಚಾಗಿ ಆರ್ಥಿಕ ವ್ಯವಸ್ಥೆಯ ನಿಶ್ಚಲತೆಯಿಂದಾಗಿ ಅಥವಾ ಬೌದ್ಧಿಕ ಆಲಸ್ಯದಿಂದಾಗಿ ಉಳಿದುಕೊಂಡು ಬಂದ ಸಂಸ್ಕೃತಿಯ ರೂಪಗಳನ್ನು ಅವುಗಳ ತಾಳಿಕೆಯ ಗುಣಕ್ಕಾಗಿ ಒಪ್ಪಿಕೊಳ್ಳುವುದು ಸೂಕ್ಷ್ಮವಾಗಿ ನಮ್ಮ ಮನಸ್ಸಿನಲ್ಲಿ ನಡೆಯುತ್ತದೆ. ಇತ್ತೀಚೆಗೆ ಶುರುವಾದ ಇನ್ನೊಂದು ಮಾನಸಿಕ ವಿಕೃತಿಯೆಂದರೆ ಯುರೋಪಿನ ತಂತ್ರಜ್ಞಾನ ನಾಗರಿಕತೆ ಮನುಷ್ಯನ ಬದುಕಿಗೆ ಮಾರಕವಾಗುತ್ತಿರುವುದರಿಂದ ಈ ನಾಗರಿಕತೆಗಿಂತ ಹೆಚ್ಚು ಆರೋಗ್ಯಕರವಾದದ್ದು ನಮ್ಮ ಸಂಸ್ಕೃತಿಯಲ್ಲಿದೆ ಎನ್ನುವ ಮನೋಭಾವ.

ಐಹಿಕವಾಗಿ ದರಿದ್ರವಾದರೇನು ಆಧ್ಯಾತ್ಮಿಕ ಸಂಪತ್ತು ಪೂರ್ವದಲ್ಲಿ ಹೇರಳವಾಗಿದೆ ಎಂದು ಹೇಳುತ್ತಿದ್ದ. ಓರಿಯಂಟಲಿಸ್ಟರ ವಿಚಾರದ ಇನ್ನೊಂದು ಅವತಾರವೇ ಇದು. ಈ ಎಲ್ಲಾ ವಿಚಾರಗಳ ಚರ್ಚೆ ಎಷ್ಟೇ ಸೂಕ್ಷ್ಮವಾಗಿ ನಡೆದರೂ ಅವುಗಳ ಹಿಂದಿರುವುದು ಬದುಕಿನ ವಾಸ್ತವಗಳಿಗೆ ಬೆನ್ನುತಿರುವಿ ಸತ್ಯವನ್ನು ಎದುರಿಸುವ ಆಹ್ವಾನದಿಂದ ಪಾರಾಗುವ ಉಪಾಯಗಳನ್ನು ಹುಡುಕುವ ಹಂಬಲವೇ ಆಗಿದೆ. ಇಂಥ ಹಂಬಲದಿಂದ ಮುಕ್ತನಾಗಿ ನಿಂತವನು ಸಾವಿರಾರು ವರ್ಷಗಳ ಪರಂಪರೆಯನ್ನು ಮತ್ತು ಅದನ್ನ ಇಲ್ಲಿಯವರೆಗೆ ಅರ್ಥೈಸಿಕೊಳ್ಳುತ್ತಿದ್ದ ಎಲ್ಲ ಬಗೆಗಳನ್ನು ತಿರಸ್ಕರಿಸಬೇಕಾಗುತ್ತದೆ. ಎಲ್ಲವನ್ನೂ ಹೊಸ ಕಣ್ಣುಗಳಿಂದ ಹೊಸದಾಗಿ ನೋಡಬೇಕಾಗುತ್ತದೆ. ಹೀಗೆ ಚಿಂತನೆಯ ಪರಂಪರೆಯನ್ನು ಹೆಚ್ಚು ಕಡಿಮೆ ಪೂರ್ತಿಯಾಗಿ ತ್ಯಜಿಸುವುದು ಕೇವಲ ಮಾನಸಿಕ ಧೋರಣೆಯೊಂದನ್ನು ತಾಳುವ (attitudinising) ಹುಸಿ ಬಂಡಾಯದ ವಿಷಯವಲ್ಲ. ಹೊಸತಾಗಿ ನೋಡುವ ಬಗೆಗಳನ್ನು ರೂಪಿಸಿಕೊಳ್ಳಲು ತಾಳ್ಮೆಯಿಂದ, ನಿಷ್ಠೆಯಿಂದ ಒಂದು ವೈಚಾರಿಕ ಶಿಲ್ಪವನ್ನು ಕಟ್ಟಿಕೊಳ್ಳಬೇಕಾಗುತ್ತದೆ. ಇತಿಹಾಸದ ಚಿಕ್ಕ ಪುಟ್ಟ ವಿವರಗಳನ್ನು ಆಸ್ಥೆಯಿಂದ ಸಂಗ್ರಹಿಸಿ ಅವುಗಳ ಎಳೆಯನ್ನು ಹಿಂಬಾಲಿಸಿಕೊಂಡು ಅವುಗಳಿಂದ ಹೊಮ್ಮುವ ಅಸ್ಪಷ್ಟ ಆಕೃತಿಯನ್ನು ಹುಡುಕುತ್ತ ಹೋಗಬೇಕಾಗುತ್ತದೆ. ವೈಜ್ಞಾನಿಕ ಚಿಂತನೆಯ ಬೆಳಕಿನಲ್ಲಿ ಪರೀಕ್ಷಿಸಿ ಆ ಆಕೃತಿಯನ್ನು ಖಚಿತಪಡಿಸಿಕೊಂಡು ಆದಷ್ಟು ಸಮಗ್ರವಾದ ಒಂದು ವಿವರಣೆಯನ್ನು ತಯಾರಿಸಿಕೊಂಡು ಅದನ್ನು ಮತ್ತೆ ಮತ್ತೆ ಒರೆಗೆ ಹಚ್ಚಿ ನೋಡಬೇಕಾಗುತ್ತದೆ. ಇಡೀ ಸಂಸ್ಕೃತಿಯೊಂದರ ಆರೋಗ್ಯವಂತಿಕೆಯನ್ನೇ ಪ್ರಶ್ನಿಸುವುದು ವಿಮರ್ಶೆಗಿಂತಲೂ ಶ್ರದ್ಧೆಯೆ ಮುಖ್ಯವಾಗಿರುವ ನಮ್ಮ ಸಂಸ್ಕೃತಿಯಲ್ಲಿ ಸುಲಭದ ಕೆಲಸವಲ್ಲ. ಆದ್ದರಿಂದಲೇ ಈ ಕೆಲಸವನ್ನು ಮಾಡುತ್ತಿರುವ ಶಂ.ಬಾ. ಅವರನ್ನು ಕನ್ನಡದ ಕೊಲಂಬಸ್ ಎಂದು ಕರೆದದ್ದು ಹಲವು ರೀತಿಯಲ್ಲಿ ಅರ್ಥಪೂರ್ಣವಾಗಿದೆ. ಕೋಲಂಬಸ್‌ನ ಹುಡುಕಾಟದ ಬಗೆಗಿದ್ದ ಎಲ್ಲ ಅನುಮಾನ ಅಪನಂಬಿಕೆಗಳು ಶಂ.ಬಾ. ಅವರ ಸಾಂಸ್ಕೃತಿಕ ಅಧ್ಯಯನಗಳ ಬಗ್ಗೆ ನಮ್ಮಲ್ಲಿ ಬಹಳ ಜನರಿಗಿವೆ. ಕೋಲಂಬಸ್‌ನಂತೆ ಅವರೂ ಈ ಕೆಲಸದಲ್ಲಿ ಒಬ್ಬಂಟಿಯೆ. ನಮ್ಮ ಸಾಹಿತ್ಯ ಮತ್ತು ಚಿಂತನೆಯ ಪರಂಪರೆಯ ಆರೋಗ್ಯದ ಬಗ್ಗೆ ಯೋಚಿಸುವವರು ಶಂ.ಬಾ. ಇನ್ನೂ ಏಕೆ ಒಂದು ದ್ವೀಪದಂತೆ ಕಾಣುತ್ತಾರೆ ಎನ್ನುವ ಪ್ರಶ್ನೆಗೆ ಉತ್ತರಿಸಬೇಕಾಗುತ್ತದೆ. ಅವರ ಒಳನೋಟಗಳಾಗಲಿ ಅವರು ಇಟ್ಟ ಹೊಸ ಹೆಜ್ಜೆಗಳಾಗಲಿ ನಮ್ಮ ಸಂವೇದನೆಯನ್ನು ಬದಲಾಯಿಸುವಂತಹ ಚರ್ಚೆಗಳನ್ನು ಹುಟ್ಟಿಸದಿದ್ದದ್ದು ನಮ್ಮ ಚಿಂತನೆಯ ಪರಂಪರೆಯ ಸೋಗಲಾಡಿತನವನ್ನು ತೋರಿಸುತ್ತದೆ. ನಮ್ಮ ಸಂಸ್ಕೃತಿಯ ಇತಿಹಾಸವನ್ನು ಮತ್ತೆ ಬೆಳೆಗಟ್ಟುವ ಕೆಲಸವನ್ನು ಈಗಾಗಲೇ ಶಂ.ಬಾ. ಮಾಡಿದ್ದರೂ "ಬ್ರಾಹ್ಮಣ–

ಶೂದ್ರ" ಇತ್ಯಾದಿ ಬಾಲಿಶ ಪರಿಕಲ್ಪನೆಗಳು ಸಾಹಿತ್ಯದ ಪರಿಸರದಲ್ಲಿ ಪುರಸ್ಕೃತವಾಗಿವೆ. ಆರೋಗ್ಯಕರ ಚಿಂತನೆಯ ಪರಂಪರೆಯಿಲ್ಲದ್ದರಿಂದ ನಮ್ಮ ಸಾಹಿತ್ಯ ಸೊರಗಿದ್ದು ಒಂದು ವಾಸ್ತವವಾಗಿದ್ದರೆ ಅಂಥ ಪರಂಪರೆಯನ್ನು ಸುರುಮಾಡಿದ ಶಂ.ಬಾ. ಇನ್ನೂ ಒಬ್ಬಂಟಿಯಾಗಿರುವುದು ಒಂದು ವಿಪರ್ಯಾಸವಾಗಿದೆ.

ಎಲ್ಲ ಮುಖ್ಯ ಚಿಂತಕರಂತೆ ಶಂ.ಬಾ. ನಿಜವಾದ ಅರ್ಥದಲ್ಲಿ ಇಲ್ಲಿಯವರೆಗೆ ಬರೆದದ್ದು ಮತ್ತು ಬರೆಯುತ್ತಲಿರುವುದು ಒಂದೇ ಒಂದು ಕೃತಿಯನ್ನು. ಅವರ ಗ್ರಂಥಗಳನ್ನು ಓದಿದಾಗ ನಿಧಾನವಾಗಿ ಒಂದು ವಿಶಾಲವಾದ ವೈಚಾರಿಕ ಶಿಲ್ಪ ನಮ್ಮೆದುರು ತೆರೆದುಕೊಳ್ಳುತ್ತದೆ. ಇಂಥ ವೈಚಾರಿಕ ಶಿಲ್ಪದ ಬೆಲೆಯಿರುವುದು ಅವರ ಸಮಗ್ರತೆಯಲ್ಲಿ ಮತ್ತು ಅದರ ಸುಸಂಗತತೆಯಲ್ಲಿ. ನಮ್ಮ ಒಟ್ಟು ಅನುಭವದ ಹೆಚ್ಚಿನ ಅಂಶವನ್ನು ಒಳಗೊಳ್ಳಬಲ್ಲ ಸಮಗ್ರತೆಯಿರುವ ವಿಚಾರಶಿಲ್ಪ ಕೇವಲ ಒಂದು ವಿಧಾನವಾಗುವುದಿಲ್ಲ. ನಮ್ಮ ಸಂವೇದನೆಯನ್ನು ತಿದ್ದಬಲ್ಲ ಒಂದು ಜೀವನ ದೃಷ್ಟಿಯೂ ಆಗುತ್ತದೆ. ಆ ವಿಚಾರಶಿಲ್ಪ ಒಂದು ಖಚಿತವಾದ ಮೌಲ್ಯ ಕಲ್ಪನೆಯ ಅಭಿವ್ಯಕ್ತಿಯೂ ಆಗುತ್ತದೆ. ಆದರೆ ವಿಚಾರಶಿಲ್ಪವೆಂದೊಡನೆ ಬರಡು ತರ್ಕದ ಕಲ್ಪನೆ ಮನಸ್ಸಿಗೆ ಬರುವುದರಿಂದ ಇನ್ನೊಂದು ಮಾತನ್ನು ಇಲ್ಲಿಯೇ ಹೇಳಬೇಕು. ಈ ವಿಚಾರಶಿಲ್ಪ ಒಬ್ಬ ಸಂವೇದನಾಶೀಲ ವ್ಯಕ್ತಿಯ ಸ್ಪಂದನೆಯಿಂದಲೇ ಪ್ರೇರಿತವಾದುದು. ಶಂ.ಬಾ. ಅವರ ಗ್ರಂಥಗಳಲ್ಲಿ ಅಲ್ಲಲ್ಲಿ ಹಣಕುವ ಮನಸ್ಸಿನ ಆತ್ಮಚರಿತ್ರೆಯ ತುಣುಕುಗಳನ್ನು ಗಮನಿಸಿದಾಗ ಈ ಮಾತು ಸ್ಪಷ್ಟವಾಗುತ್ತದೆ. ಕರ್ನಾಟಕದ ಸಂಸ್ಕೃತಿಯ ಹುಡುಕಾಟ ಶುರುವಾದದ್ದು ತೀವ್ರ ಭಾವನೆಯೊಂದರ ಮೂಲದಲ್ಲಿಯೆ. ಕಂನಾಡಿನ ಬಗೆಗಿನ ಕುರುಡು ಶ್ರದ್ಧೆಯ ಮಾತುಗಳ ಹಿಂದೆ ಏನಾದರೂ ಸತ್ಯವಿದೆಯೇ ಎನ್ನುವುದನ್ನು ಹುಡುಕುವುದಕ್ಕಾಗಿ ಕಂನಾಡಿನ ಮೂಲಗಳನ್ನು ಇತಿಹಾಸದಲ್ಲಿ ಗುರುತಿಸಲು ಶಂ.ಬಾ. ಹೊರಡುತ್ತಾರೆ. ವೇದದಲ್ಲಿಯ ದೇವತಾ ಪ್ರತಿಮೆಗಳ ಬಗ್ಗೆ ಚಿಂತನೆ ಮಾಡುತ್ತಿದ್ದಾಗ ಸರ್ಪವನ್ನೂ ಸೂರ್ಯನನ್ನೂ ಸಮೀಕರಿಸುವ ಪ್ರತಿಮೆಯೊಂದರಿಂದ ಅವರಿಗಾದ ಆಘಾತವನ್ನು ಅವರೇ ದಾಖಲೆ ಮಾಡಿದ್ದಾರೆ. ಶ್ರದ್ಧೆಯ ಬೇರುಗಳೇ ಅಲ್ಲಾಡಿದಂತಾಗಿ ಅವರಿಗೆ ಅನಿಸಿದ ದಿಗ್ಭ್ರಮೆ ಅವರನ್ನು ಋಗ್ವೇದದ ಎಲ್ಲ ದೇವತಾ ಪ್ರತೀಕಗಳ ಅರ್ಥವಿಶ್ಲೇಷಣೆಯಲ್ಲಿ ತೊಡಗಿಸುತ್ತದೆ. ಆದ್ದರಿಂದ ಶಂ.ಬಾ. ಅವರ ವಿಚಾರಶಿಲ್ಪ ಬರಿ ತರ್ಕದಿಂದ ಪ್ರೇರಿತವಾದದ್ದಲ್ಲ. ಅದು ಅವರ ವ್ಯಕ್ತಿತ್ವದ ಸೊಗಡನ್ನು ಇಡಿಯಾಗಿಯೇ ಉಳಿಸಿಕೊಂಡಿದೆ. ಶ.ಂಬಾ. ಅವರ ಸಾಂಸ್ಕೃತಿಕ ಅಧ್ಯಯನದ ಬಗ್ಗೆ ಬರೆಯುವುದೆಂದರೆ ಅವರು ಬಳಸುವ ವಿಧಾನಗಳ ಬಗ್ಗೆ ಬರೆಯುವುದಲ್ಲ. ಒಂದು ಸಮಗ್ರ ವ್ಯಕ್ತಿತ್ವದ ಆಕೃತಿಯುಳ್ಳ ವಿಚಾರಶಿಲ್ಪವೊಂದರ ಬಗ್ಗೆ

ಜೀವನ ದೃಷ್ಟಿಯೊಂದರ ಬಗ್ಗೆ ಬರೆಯುವುದಾಗುತ್ತದೆ. ಶಂ.ಬಾ. ಅವರ ವಿಚಾರ ಶಿಲ್ಪದ ಕೆಲವು ಮುಖ್ಯ ಅಂಶಗಳನ್ನು ವಿವರಿಸುವುದು ಈ ಲೇಖನದ ಉದ್ದೇಶ.

ಅನುಮಾನಿತ ಸತ್ಯದ (hypothesis) ಬಗ್ಗೆ ಬರೆಯುತ್ತ ಶಂಬಾ ಒಂದು ಹೇಳಿಕೆಯನ್ನು ಉದ್ಧರಿಸುತ್ತಾ ಹೇಳುತ್ತಾರೆ. ಅಮುಖ್ಯವೆಂದು ತೋರುವ ವಾಸ್ತವಗಳ ಅವ್ಯವಸ್ಥೆಯ ಮಧ್ಯೆ ಒಂದು ಅನುಮಾನಿತ ಸತ್ಯವನ್ನಿಟ್ಟರೆ ಅಲ್ಲಿ ಒಂದು ವ್ಯವಸ್ಥೆ, ಅರ್ಥ ಹುಟ್ಟಿಕೊಳ್ಳುತ್ತದೆ. ಸಂಗತಿಗಳ ಪರಸ್ಪರ ಸಂಬಂಧ ಗೋಚರವಾಗಿ ಅವು ಒಂದು ತರ್ಕದತ್ತ ನಮ್ಮನ್ನು ಒತ್ತಾಯಿಸುವಂತೆ ತೋರುತ್ತದೆ. ಇದೇ ಮಾತನ್ನು ಅವರ ಸಂಶೋಧನೆಯ ವಿವರಗಳಿಗೂ ಅನ್ವಯಿಸಬಹುದು. ಹೊಸತಾಗಿದ್ದರಿಂದ ಮೊದಲು ಓದಿಗೆ ವಿಚಿತ್ರವೆನ್ನಿಸುವ ಅವರ ಸಂಶೋಧನೆಯ ವಿವರಗಳು ಕೆಲವೊಮ್ಮೆ ಅಸಂಗತವೂ ಅನ್ನಿಸಬಹುದು. ಆದರೆ ಅವರ ವಿಚಾರಶಿಲ್ಪವನ್ನು ಅಂದರೆ ಅವರು ಅನುಭವವನ್ನು ಗ್ರಹಿಸುವ ಬಗೆಯನ್ನು ಅರ್ಥ ಮಾಡಿಕೊಂಡ ಕೂಡಲೇ ವಿವರಗಳ ಪ್ರಸ್ತುತತೆ ಗೊತ್ತಾಗುತ್ತದೆ. ಎಲ್ಲವೂ ಒಂದು ಸಮಗ್ರವಾದ ಗ್ರಹಿಕೆಯ ಅಂಗಗಳಾಗಿ ತಮ್ಮ ಸ್ಥಾನಗಳನ್ನು ಪಡೆದುಕೊಳ್ಳುತ್ತವೆ. ಮೊದಲಿನ ಗ್ರಂಥಗಳಲ್ಲಿ ವಿವರಗಳನ್ನು ಹೊಂದಿಸುವ ಕೆಲಸವನ್ನು ಹಿನ್ನಲೆಯಲ್ಲಿದ್ದು ಮಾಡುವಂತೆ ತೋರುತ್ತಿದ್ದ ಈ ವಿಚಾರಶಿಲ್ಪದ ಎಲ್ಲ ಅಂಶಗಳನ್ನು ಶಂ.ಬಾ. "ಋಗ್ವೇದ ಸಾರ" ಗ್ರಂಥದಲ್ಲಿ ಬಿಡಿಸಿ ವಿವರಿಸಿದ್ದಾರೆ. ಮೂಲ ಪ್ರಬಂಧಕ್ಕೆ ಪೂರಕವಾಗಿ ಬರುವ ಈ ವಿವರಣೆಯ ಭಾಗ ಬಹಳ ಮುಖ್ಯವಾಗಿದೆ.

ಸಂಸ್ಕೃತಿಯ ಅರ್ಥವೇ ಸಂಶೋಧನೆಯ ಮುಖ್ಯ ವಿಷಯವಾದದ್ದರಿಂದ ಶಂ.ಬಾ. ಮೊದಲಿಗೆ ಜೀವನಕ್ಕೆ ಅರ್ಥವಿದೆಯೇ ? ಇದ್ದರೆ ಆ ಅರ್ಥದ ಸ್ವರೂಪವೇನು ಎನ್ನುವ ಪ್ರಶ್ನೆಯನ್ನು ಎತ್ತಿಕೊಳ್ಳುತ್ತಾರೆ. ಅವರು ಹೇಳುವಂತೆ ಜೀವನಕ್ಕೆ ಒಂದು ಅರ್ಥವಿದೆ. ಆದರೆ ಇದು ಒಬ್ಬ ವ್ಯಕ್ತಿಯ ಆಶಯಅಥವಾ ಅಪೇಕ್ಷೆಯಿಂದ ರೂಪಗೊಳ್ಳುವ ಅರ್ಥವಲ್ಲ. ಅವರ ದೃಷ್ಟಿಯಲ್ಲಿ ಅರ್ಥ ಸಾಮಾಜಿಕ ಅಥವಾ ಸಮಷ್ಟಿಯ ಬದುಕಿನಲ್ಲಿ ಮಾತ್ರ ದೊರಕಬಲ್ಲದು. ಆದ್ದರಿಂದ ಅನುಭವ ಎಲ್ಲರ ಪಾಲಿಗೆ ಬರುವ ಸಂಗಾತಿಯಾದಂತೆ ಅರ್ಥ ನಮ್ಮ ವೈಯಕ್ತಿಕತೆಯನ್ನು ಮೀರಿರುವಂತದು. ಈ ಅರ್ಥವನ್ನು ಪ್ರತಿಯೊಬ್ಬ ವ್ಯಕ್ತಿ ಸಾಕ್ಷಾತ್ಕಾರಗೊಳಿಸಿಕೊಳ್ಳಬಹುದಾದರೂ ಅದು ಅವನ ವೈಯಕ್ತಿಕತೆಯಿಂದ ಅಬಾಧಿತವಾಗಿರುವಂತದು. ಈ ದೃಷ್ಟಿಯಲ್ಲಿ ಅರ್ಥವು 'ವಿಶ್ವಸ್ಥ' ವಾಗಿರುವುದರಿಂದ ಅದನ್ನು ಕಂಡುಕೊಳ್ಳುವ ಸಾಧ್ಯತೆಯಿದೆ. ಸಾಧ್ಯತೆ ಮಾತ್ರವಲ್ಲ ಈ ಅರ್ಥ ಹೊರಬರುವುದು ಒಂದು ಅನಿವಾರ್ಯವೂ ಆಗಿದೆ. ಆದರೆ ಶಂ.ಬಾ.

ಪದೇ ಪದೇ ಹೇಳುವಂತೆ ಈ ಅರ್ಥ ಅಥವಾ ಸತ್ಯ ಯಾವಾಗಲೂ ಸಾಂಕೇತಿಕವಾಗಿರುತ್ತದೆ. ಅಂದರೆ ಅವು ಮೂರ್ತ ಅನುಭವಗಳ ಮೂಲಕ ಹೊರಹೊಮ್ಮುವದಾದರೂ ಅನುಭವದಲ್ಲಿಯೇ ಪೂರ್ತಿಯಾಗಿ ಲಯವಾಗುವಂಥದ್ದು ಅಲ್ಲ. ಅಂದರೆ ಅರ್ಥ ಅನುಭವವನ್ನು ಮೀರಿರುವಂಥದ್ದು. ಇಲ್ಲಿ ದಾರಿತಪ್ಪುವುದು ಸುಲಭವಾಗಿದ್ದರಿಂದ ಶಂ. ಬಾ. ಇದನ್ನು ವಿವರವಾಗಿ ವಿಶ್ಲೇಷಿಸುತ್ತಾರೆ. ಮೂರ್ತ ಅನುಭವದ ಬೆಂಬಲವೇ ಇಲ್ಲದೆ, ಅಥವಾ ಅದರ ಜೊತೆಗೆ ಸುಸಂಗತ ಸಂಬಂಧವಿಲ್ಲದೆ ಅರ್ಥ ಸತ್ಯವಾಗಿರಲಾರದು. ಆದರೆ ಅದೇ ವೇಳೆಗೆ ಒಬ್ಬ ವ್ಯಕ್ತಿಗೆ ಲಭಿಸುವ ಮೂರ್ತ ಅನುಭವವೇ ಇಡಿಯಾಗಿ ಅರ್ಥವನ್ನು ಒಳಗೊಂಡಿರುತ್ತದೆ' ಎನ್ನುವುದು ತಪ್ಪು. ಮೂರ್ತ ಅನುಭವದ ಹಿಂದಿದ್ದು ಅದನ್ನು ನಿರ್ದೇಶಿಸುವ ಅರ್ಥ ಸಾಂಕೇತಿಕವಾಗಿರುತ್ತದೆ. ಒಂದು ರೀತಿಯಲ್ಲಿ ಕಾವ್ಯದ ಅರ್ಥವಿದ್ದಂತೆ. ಒಂದು ಕಾವ್ಯದ ಎಲ್ಲ ಮೂರ್ತ ವಿವರಗಳು ಬಿಡಿಬಿಡಿಯಾಗಿ ಅರ್ಥ ಕೊಡುವಂತಿದ್ದರೂ ಒಟ್ಟು ಕಾವ್ಯದ ಅರ್ಥ ಈ ಮೂರ್ತ ವಿವರಗಳನ್ನು ಮೀರಿರುತ್ತದೆ. ಆದರೆ ಮೂರ್ತ ವಿವರಗಳ ಸ್ವಂತತೆಯನ್ನು ಅಮಾನ್ಯ ಮಾಡುವ ರೀತಿಯದಲ್ಲ. ಈ ಪರಿಕಲ್ಪನೆ ಶಂ. ಬಾ. ಅವರ ವಿಚಾರ ಶಿಲ್ಪದ ಮುಖ್ಯ ಅಂಶವಾಗಿದೆ. ಆದ್ದರಿಂದಲೇ ಅವರು 'ಮಾಧ್ಯಮ' ಮತ್ತು ಸಾಂಕೇತಿಕ ಅರ್ಥ ಇವುಗಳ ಮಧ್ಯದ ವ್ಯತ್ಯಾಸವನ್ನು ಮುಖ್ಯವಾಗಿ ಗಮನಿಸುತ್ತಾರೆ. ಒಂದು ಪುರಾಣ ಕತೆಯಾಗಲಿ (Myth) ಒಂದು ಸಾಂಸ್ಕೃತಿಕ ಸಂಕೇತವಾಗಲಿ ಅದೆಷ್ಟೇ ಮೂರ್ತವಾಗಿರಲಿ ಅವುಗಳ ಅರ್ಥ ಈ ರೀತಿ ಸಾಂಕೇತಿಕವಾಗಿರುತ್ತದೆ. ಸಾಂಕೇತಿಕ ಅರ್ಥದ ಬದಲಾಗಿ ಮೂರ್ತ ಮಾಧ್ಯಮವನ್ನೇ ಎಲ್ಲವೂ ಎಂದುಕೊಳ್ಳುವುದು ಶಂ. ಬಾ. ಅವರ ಪ್ರಕಾರ ಕತ್ತಲೆಯನ್ನು ಪೂಜಿಸುವ ಜೀವನ ದೃಷ್ಟಿಯ ದ್ಯೋತಕವಾಗಿದೆ. ಅನುಭವದಲ್ಲಿಯೇ ತನ್ಮಯವಾಗಿ, ಅದರಲ್ಲೆ ಆನಂದಪಡುವ ಸಂಸ್ಕೃತಿ ಮನುಷ್ಯನನ್ನು ಪ್ರಾಣಿಗಳ ಮಟ್ಟಕ್ಕೆ ತಳ್ಳುತ್ತದೆ. ಇದಕ್ಕೆ ವಿರುದ್ಧವಾಗಿ ಅನುಭವದ ಹಿಂದಿನ ಸಾಂಕೇತಿಕ ಅರ್ಥವನ್ನು ಮಾನ್ಯ ಮಾಡುವ ಸಂಸ್ಕೃತಿ ನಾಗರಿಕತೆಯ ಮುನ್ನಡೆಗೆ ಸಹಾಯವಾಗಬಲ್ಲದು. ಮೊದಲ ಓದಿಗೆ ಕೂದಲು ಸೀಳುವ ಕೆಲಸದಂತೆ ತೋರುವ ಈ ಅಂಶ ಶಂ. ಬಾ. ಅವರ ಬಹಳಷ್ಟು ಒಳನೋಟಗಳಿಗೆ ಪ್ರೇರಣೆಯಾಗುತ್ತದೆ ಎನ್ನುವುದನ್ನು ಗಮನಿಸಬೇಕು. ಒಂದು ಕ್ಷಣದ ವೈಯಕ್ತಿಕ ಅನುಭಾವವೆ ಮುಖ್ಯವೆನ್ನುವ ಜೀವನದೃಷ್ಟಿ ಸಹಜವಾಗಿಯೇ ಸಮಾಜ ವಿಮುಖವಾಗುತ್ತದೆ. ವೈಯಕ್ತಿಕ ಮೋಕ್ಷವನ್ನು ಭೋದಿಸುವ ಎಲ್ಲ ಧರ್ಮಗಳಿಗೂ ಜೀವನದಿಂದ ನಿವೃತ್ತಿಯನ್ನು ಬೆಂಬಲಿಸುತ್ತವೆ. ಈ ಧರ್ಮಗಳ ಹಿಂದೆ ಇರುವುದು ಮೂರ್ತ ಅನುಭವ ಮತ್ತು ಸಾಂಕೇತಿಕ ಅರ್ಥಗಳ ಮಧ್ಯ ಇರುವ ವ್ಯತ್ಯಾಸವನ್ನು ಗುರುತಿಸದೇ ಇರುವುದು. ಏಕೆಂದರೆ ಅನುಭವವನ್ನು ಮೀರಿದ ಅರ್ಥವನ್ನು ಹುಡುಕ ಬಯಸುವ

ಜೀವನದೃಷ್ಟಿ ಅನುಭವದಲ್ಲಿ ಅದ್ಯಾತ್ಮಗೊಳ್ಳುವುದೇ ಜೀವನ ಪರಮಗುರಿಯೆಂದು ಹೇಳಲಾರದು. ಇಂಥ ದೃಷ್ಟಿಯಿಂದಲೇ ಶಂ. ಬಾ. ಪುರಾಣಕತೆಗಳನ್ನು, ಸಾಂಸ್ಕೃತಿಕ ಸಂಕೇತಗಳನ್ನು ವಿಶ್ಲೇಶಿಸುತ್ತಾರೆ ಅವರಿಗೆ ಪ್ರತಿಯೊಂದು ಆಚರಣೆ, ಭಾಷಾ ಪ್ರತಿಮೆ ಜೀವನದೃಷ್ಟಿಯೊಂದರ ಮಾಧ್ಯಮ ರೂಪವಾಗಿ ಕಂಡುಬರುತ್ತದೆ. ಈ ಪ್ರತಿಮೆ ಆಚರಣೆಗಳು ಸಂಕೇತಿಸುವ ಜೀವನದೃಷ್ಟಿಯನ್ನು ಅರಿತುಕೊಳ್ಳುವುದು ಅವರಿಗೆ ಮುಖ್ಯವಾಗಿ ಕಂಡುಬರುತ್ತದೆ. ಆದ್ದರಿಂದ ಶಂ. ಬಾ. ಅವರಿಗೆ ಸಾಂಸ್ಕೃತಿಕ ಅಧ್ಯಯನದ ಎರಡು ಮುಖ್ಯ ಸಾಮಗ್ರಿಗಳು (Tools) ಎಂದರೆ ಭೌತಿಕ ಪ್ರತಿಮೆಗಳು ಮತ್ತು ಆಚರಣೆಗಳು.

ಭಾಷಿಕ ಪ್ರತಿಮೆಗಳ ವಿಶ್ಲೇಷಣೆಗಾಗಿ ಅವರು ಒಂದು ವಿಶಾಲವಾದ ವೈಚಾರಿಕ ಹಿನ್ನೆಲೆಯನ್ನು ಬಳಸಿಕೊಳ್ಳುತ್ತಾರೆ. ಅವರ ಪ್ರಕಾರ ಒಂದು ಸಂಸ್ಕೃತಿಯೆಂದರೆ 'ನೇತಾರ ಸಮಿತಿ' ಸಮಯ ಮತ್ತು ಅಭಿವ್ಯಕ್ತಿ ಮಾಧ್ಯಮಗಳ ಸಂಕೀರ್ಣವಾಗಿದೆ. ನೇತಾರ ಸಮಿತಿಯೆಂದರೆ ಸಂಸ್ಕೃತಿಯೊಂದರ ಮುಂಚೂಣಿಯಲ್ಲಿರುವ ಧೀಮಂತರ ಗುಂಪು. ಇವರು ಸಂಸ್ಕೃತಿಯ ರೂಪರೇಶಗಳನ್ನು ರೂಪಿಸುವ ವರ್ಚಸ್ಸುಳ್ಳವರಾಗಿರುತ್ತಾರೆ. ಸಮಯವೆಂದರೆ ಭೌತಿಕಕಾಲವಲ್ಲ. ಇತಿಹಾಸದ ಒಂದು ಕಾಲ ಭಾಗವೂ (Period) ಅಲ್ಲ. ಸಮಯವೆಂದರೆ ಸಾಂಸ್ಕೃತಿಕ ಸಾಮಾನ್ಯತೆಯನ್ನುಳ್ಳ ಅದರಲ್ಲಿ ಅದ್ದಿ ಹೋದ ಒಂದು ಪರಿಸರ (Ambience). ಇದು ಕಾಲ ಮತ್ತು ದೇಶಗಳ ಚೌಕಟ್ಟಿನಲ್ಲಿ ಇರುವುದಾದರೂ ಅವುಗಳಿಗೆ ಸೀಮಿತವಾದದ್ದಲ್ಲ. ಏಕೆಂದರೆ ಒಂದು ಸಾಂಸ್ಕೃತಿಕ ಸಮಯದಲ್ಲಿ ಹುಟ್ಟಿಕೊಂಡ ಜೀವನದೃಷ್ಟಿ, ಅದಕ್ಕೆ ಪೂರಕವಾಗಿರುವ ಭಾಷಾ ಪ್ರತಿಮೆಗಳು ಇನ್ನೊಂದು ಕಾಲದಲ್ಲೂ ಪ್ರಭಾವಶಾಲಿಯಾಗಿರಬಹುದು. ಉದಾಹರಣೆಗೆ ಋಗ್ವೇದದಲ್ಲಿರುವ ಕೆಲವು ಭಾಷಾ ಪ್ರತಿಮೆಗಳು, ದೇವತೆಗಳು, ವೇದಪೂರ್ವ ಸಾಂಸ್ಕೃತಿಕ ಸಮಯದಲ್ಲಿ ಹುಟ್ಟಿಕೊಂಡಂಥವು. ಅವುಗಳು ಸಂಕೇತಿಸುವ ಜೀವನ ದೃಷ್ಟಿ ವೇದದ ಇನ್ನಿತರ ಭಾಷಾ ಪ್ರತಿಮೆಗಳು ಸಂಕೇತಿಸುವ ಜೀವನದೃಷ್ಟಿಗೆ ವಿರುದ್ಧವಾಗಿರುವಂಥದು. ಆದ್ದರಿಂದ ಅವುಗಳ ಚರ್ಚೆ ಕೇವಲ ವೇದ ಕಾಲೀನ ಸಮಾಜಿ ಪರಿಸರದ ಹಿನ್ನೆಲೆಯಲ್ಲಿ ನಡೆಯಲಾರದು. ಇನ್ನು ಸಂಸ್ಕೃತಿಯ ಮೂರನೆಯ ಅಂಗವಾದ ಭಾಷಿಕ ಪ್ರತಿಮೆಗಳಿಗೆ ಶಂ. ಬಾ. ಹೆಚ್ಚಿನ ಮಹತ್ವ ಕೊಡುತ್ತಾರೆ. ಅವರು ನಂಬುವಂತೆ ಭಾಷೆ ಮನುಷ್ಯನ ಕಣ್ಣು. ಭಾಷಿಕ ಪ್ರತಿಮೆಗಳು ಮನುಷ್ಯನು ಯೋಚಿಸುವ ಅಥವಾ ಭಾವಿಸುವ ಕ್ರಿಯೆಯ ಮಿತಿಗಳನ್ನು ರೂಪಿಸುತ್ತವೆ. ಅವನು ತನ್ನ ಸುತ್ತಲಿನ ಜಗತ್ತನ್ನು ಅರ್ಥಮಾಡಿಕೊಳ್ಳುವುದು ಭಾಷೆಯ ಮೂಲಕವೆ. ಇದಕ್ಕೂ ಮುಖ್ಯ ವಿಚಾರವೆಂದರೆ ಈ ಭಾಷಾ ಪ್ರತಿಮೆಗಳು ಅವುಗಳು ಹುಟ್ಟಿಕೊಂಡ ಸಾಂಸ್ಕೃತಿಕ

ಸಮಯದ ಸ್ಮೃತಿಗಳನ್ನು ನಿರಂತರವಾಗಿ ಹೊತ್ತು ತರುತ್ತವೆಯಾದ್ದರಿಂದ ಅವು ಸಂಸ್ಕೃತಿಯ ಇತಿಹಾಸದ ಮುಖ್ಯ ದಾಖಲೆಗಳು ಕೂಡ. ಉದಾಹರಣೆಗೆ ಮೂಲ ಕಂದ ಮಿಳ ಭಾಷೆಯ ಸ್ಥಳನಾಮಗಳು ಆ ಭಾಷೆಯ ಜನ ಆರ್ಯರಿಗಿಂತ ಮೊದಲೇ ಭಾರತದ ಉದ್ದಗಲಕ್ಕೂ ಹರಡಿದ್ದರೆಂಬುದನ್ನು ಸೂಚಿಸುತ್ತವೆ. ಅಲ್ಲದೆ ಆ ಜನ ಕುರುಬರು, ಹಟ್ಟಿಕಾರರು ಆಗಿದ್ದರೆಂಬುದನ್ನು ತೋರಿಸುತ್ತವೆ. ಅದೇ ರೀತಿ ಸಂಸ್ಕೃತದಲ್ಲಿರುವ ಕಂದಮಿಳ ಶಬ್ದಗಳು ಸಂಸ್ಕೃತ ಭಾಷಿಕರ ಮತ್ತು ಕಂದಮಿಳ ಭಾಷಿಕರ ಮಧ್ಯ ಇದ್ದ ಸಂಬಂಧವನ್ನು ಸೂಚಿಸುತ್ತವೆ. ಅಂದರೆ ಶಂ. ಬಾ. ಅವರಿಗೆ ಇದು ಕೇವಲ ಶಬ್ದಗಳ ಉತ್ಪತ್ತಿಗೆ ಸಂಬಂಧಪಟ್ಟ ವಿಷಯವಲ್ಲ. ಭಾಷಿಕ ಪ್ರತಿಮೆಗಳು ಸಂಸ್ಕೃತಿಯ ಸಾತ ತ್ಯತೆಯನ್ನು ಜೊತೆಗೆ ಬದಲಾವಣೆಗಳನ್ನು ಹಿಡಿದಿಡುತ್ತವೆ. ಅವು ಪೂಜೆಗೆ ಸಂಬಂಧಿಸಿದ ಭಾಷಿಕ ಪ್ರತಿಮೆಗಳು ಇಂಡೋ-ಆರ್ಯನ್ ಭಾಷೆಗಳ ಪ್ರತಿಮೆಗಳ ಜತೆಗಿನ ಸಮಾನತೆಯಿಂದಾಗಿ ಒಂದು ಜನಾಂಗದ ಇತಿಹಾಸವನ್ನು ಸೂಚಿಸುತ್ತವೆ. ಇವುಗಳ ಜತೆಗೆ ಕಂಡು ಬರುವ ಅಪ, ರಷ, ಸಲಿಲ ಸಂಬಂಧಿ ಭಾಷಾ ಪ್ರತಿಮೆಗಳು ಆರ್ಯೇತರ ಜನಾಂಗದ ಸ್ಮೃತಿಗಳನ್ನು ಹೊತ್ತು ತರುತ್ತವೆ. ಶಂ. ಬಾ. ಅವರಿಗೆ ಕರನಾಡಿನ ಪೂರ್ತಿ ಇತಿಹಾಸದ ದಾಖಲೆಗಳು ಭಾಷಿಕ ಪ್ರತಿಮೆಗಳಲ್ಲಿ ಕಂಡು ಬರುತ್ತವೆ. ಆದರೆ ಅವರು ಭಾಷಿಕ ಪ್ರತಿಮೆಗಳ ಜೊತೆಗೆ ಇತಿಹಾಸದ ಇತರ ದಾಖಲೆಗಳನ್ನು ತಾಳೆಮಾಡಿ ನೋಡಿದ ಮೇಲೆಯೇ ಯಾವುದೇ ತೀರ್ಮಾನಕ್ಕೆ ಬರುತ್ತಾರೆ. ಏಕೆಂದರೆ ಅವರೇ ಹೇಳುವಂತೆ ಈ ಬಗೆಯ ಅಧ್ಯಯನ ಇನ್ನೂ ತನ್ನ ಬಾಲ್ಯದಲ್ಲಿದೆ.

●

(ಇದರ ಮುಂದಿನ ಭಾಗವನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು)

# ಈಚಿನ ಒಂದು ರಾತ್ರಿ

ಗಾಳಿ ಬೀಸದೇ ತಟಸ್ಥ ನಿಂತ ಖಾಲಿ
ಖಾಲಿ ಮನಸ್ಸಲ್ಲಿ
ಅಲ್ಲೊಂದು ಇಲ್ಲೊಂದು ಅಬ್ಬೇಪಾರಿ ಮೋಡ
ದೂರ. ಊರಾಚೆಗಿರುವ ಕಾಡು ಗಿಡ
ಗೂಡು ಗಕ್ಕನೆದ್ದಾಗ ತಬ್ಬಿಬ್ಬಾಗಿ ಕಾಗೆ
ನೇರ ಹಾರಿ ಮುಖಕ್ಕೆ ಬಡಿದರೂ ಆಕಾಶ ನಿರ್ವಿಕಾರ-
ಚಂದ್ರ ಕಣ್ಣಲ್ಲ; ಅದೊಂದು
ಒಡೆದ ಗಾಜಿನ ಗೋಲಿ
ಹತ್ತ ಹತ್ತಿರದ ಕೂಸಿನಂತ್ಯಸಂಸ್ಕಾರಕ್ಕೆ ಬಂದು
ತಲೆ ತಗ್ಗಿಸಿದ ಎತ್ತರದ ಗಂಡಸರ ಹಾಗೆ
ಮನೆಮನೆಯ ತೆಂಗಿನ ಮರ

2

ಕಂಡಂತಾಗಿ, ಕಂಡದ್ದು ಖಚಿತವಾಗುವ ಮೊದಲೆ
ಹರಿದು ಹರಡಿದ ಹಾಗೆ ಬೆಳುದಿಂಗಳು
ಹಾಡು ಹಗಲಲ್ಲಿ ಕಾಡಿದ್ದ ಮೂರು ಮಾಟಗಾತಿಯರೀಗ
ಬಾವುಲಿಗಳಾಗಿ ಹಾರಿ ಕುಪ್ಪಳಿಸುವುವು ಕಪ್ಪು ನೆರಳು

ನಕ್ಷತ್ರವಲ್ಲ, ಆಕಾಶ-ನವಿಲು ಹತ್ತಿಕ್ಕಿದಳಲು,
ಬೀಳದೇ ಹೊಳೆಹೊಳೆದ ಕಣ್ಣೀರ ತೊಟ್ಟು
ಮಗುವಿನದು, ಇಲ್ಲ, ಮಗುವಂಥ ಕನಸಿನ ಕಣ್ಣ
ಯಾರು ಕಿತ್ತರೋ, ನಕ್ಷತ್ರ ಕಳಚಿ ಬಿತ್ತು.

ತಾನೆತಾನಾದ ಬಾನದ ಚಿಕ್ಕ ನೆಲ ಜಗ್ಗಿ
ಒಲವುಕ್ಕಿ ಮುಳುಗಲಿಲ್ಲ,
ಎದೆ ಹೊಕ್ಕು ಬಾಣ ಮುಕ್ಕಾದ ಪ್ರಾಣ-
ಉರುಳಿದಾಗ ನೆಲ ಅಲುಗಲಿಲ್ಲ.

ನೆನಪಾಗುವುದು ಯುಗದಾದಿ ಚೇತನದ ಪ್ರೀತಿ ಪಾಲನೆಗೆ
ಬಾಹಿರನಾದ ನನ್ನ ಪತನ.
ನೆನಪಾಗುವುದು ಅಷ್ಟೆತ್ತರಕ್ಕೆತ್ತಿ ಕೈಬಿಟ್ಟ ಅಹಂಕಾರ-
ಯಾವ ಪುರುಷಾರ್ಥಕ್ಕೆ ಮಂತ್ರಪಠನ ?

---

ಬಿ.ಸಿ. ರಾಮಚಂದ್ರಶರ್ಮ, 222, 39ನೇ ಅಡ್ಡರಸ್ತೆ, ಐದನೇ ಬ್ಲಾಕ್, ಜಯನಗರ,
ಬೆಂಗಳೂರು-41

ತೊಳಸು ಬಳಸಿನ ಜಾಡು, ದಾರಿ ಬೆಳಗದ ತಾರೆ,
ಎಂಥ ಹುಟ್ಟಿನ ಕಡೆಗೆ ಇಂಥ ಪಯಣ ?
ನಿಧಾನ ನಿಧಾನ ಕರಗಿದಂತಃ ಕರಣದಂತೆಯೇ
ಕ್ಷಯಿಸಿ ಕ್ಷಯಿಸಿ ಕ್ಷಯವಾದ ಕ್ರೋಧನ

3

ಹಠಾತ್ತನೆ,
ಎಣ್ಣೆಗಾಣದ ಗೇಟೊಂದು ತೆರೆದು
ಮೇಲೆದ್ದ ಕೀರಲು ಸದ್ದು
ಚ್ಯುತಿ ಬಂತು ಮೌನಕ್ಕೆ ಗತ ಬಂತು
ನಿಶ್ಚಲ ನಿಂತ ಜಗತ್ತಿಗೆ.
ಹೆಣ್ಣೊಂದು ಹೊರಬಂದು
ನಗರಸಭೆ ಎಂದೋ ನೆಟ್ಟು
ಮರೆತ ಅನಾಥ ಸಾಲುಮರಕ್ಕೆ
ನೀರೆರೆದಾಗ, ತೆಂಗು ತಲೆಯೆತ್ತಿ ಗರಿ ಮಿನುಗಿದಾಗ,
ಕಣ್ಣ ಹೊಡೆಯಿತು ಚಿಕ್ಕೆ.
ಗಾಳಿ ತೆಳ್ಳಗೆ ಬೀಸಿ, ಎಲ್ಲೋ ಒಂದು ಮಗುವತ್ತು,
ಪಿಸು ಮಾತಾಡಿದೆಲೆ ಕಿಸಕ್ಕನೆ ನಕ್ಕು,
ಹರಿದು ಹಂಚಿಹೋಗಿದ್ದ ಮೋಡದ ತುಣುಕು
ಇನ್ನೊಂದರತ್ತ ತೆವಳಿದಂತೆ–
ದಬ್ಬಾಳಿಕೆಯ ವಿರುದ್ಧ ಒಗ್ಗಟ್ಟಾದ
ವಿರೋಧಪಕ್ಷಗಳಂತೆ,
ಆಕಾಶದಲ್ಲೊಂದು ಸಂತೆ.
ಮಗು ಹೆಣ್ಣು ತೆಂಗು ನಕ್ಷತ್ರಗಳನಪ್ಪು
ನನ್ನೊಡಲ ಒಳಗಿಟ್ಟು
ಕಾಯುತ್ತೇನೆ ಕಾಯುತ್ತೇನೆ
ಅಂಗುಲಂಗುಲವಾಗಿ ಸಾಯುತ್ತಲೇ ಕಾಯುತ್ತೇನೆ
ಆ ಮೊದಲ ಬೆಳಕಿಗೆ
ಜಡ ಕತ್ತಲನ್ನೊಂದು ಹಿಡಿದು ಝಾಡಿಸಿದ ಆ ಚಳುಕಿಗೆ

—ರಾಮಚಂದ್ರಶರ್ಮ

ಚಿಂತಿಸುವ ಜೀವಂತ ಮನಸ್ಸು

# ಡಾ|| ಜಿ. ಎಸ್. ಶಿವರುದ್ರಪ್ಪ

ಸಂದರ್ಶನ : ಎಚ್.ಎಸ್. ವೆಂಕಟೇಶ್ ಮೂರ್ತಿ

ಆಧುನಿಕ ಕನ್ನಡ ಸಾಹಿತ್ಯ ಸಂಧರ್ಭದಲ್ಲಿ ಡಾ|| ಜಿ. ಎಸ್ ಶಿವರುದ್ರಪ್ಪನವರದು ಒಂದು ಮುಖ್ಯವಾದ ಹೆಸರು. ಕವಿಯಾಗಿ, ವಿಮರ್ಶಕರಾಗಿ, ಕಾರ್ಯಸಂಘಟಕರಾಗಿ ಅವರು ತರುಣ ಪೀಳಿಗೆಯ ಮೇಲೆ ಗಾಢವಾದ ಪ್ರಭಾವ ಬೀರಿದ್ದಾರೆ. ಎರಡು ವರ್ಷ ಎಂ. ಎ ತರಗತಿಗಳಲ್ಲಿ ಅವರ ವಿದ್ಯಾರ್ಥಿಯಾಗುವ ಯೋಗ ನನಗೆ ಲಭಿಸಿತ್ತು. ಆ ಕಾಲದಲ್ಲಿ ಅಧ್ಯಾಪಕರಾಗಿ ಅವರು ನನ್ನ ಮೆಲೆ ಬೀರಿದ ಪ್ರಭಾವ ಕೂಡ ಅಷ್ಟೇ ಗಾಢವಾದುದು. ಆ ದಿನಗಳಲ್ಲೀ ಅಧ್ಯಯನ ಕೇಂದ್ರ ನಡೆಸುತ್ತಿದ್ದ ವಿಚಾರ ಸಂಕಿರಣಗಳು ನಮ್ಮನ್ನು ತೀವ್ರವಾಗಿ ಪ್ರಭಾವಿಸಿದ್ದು. ಭಿನ್ನ ವಿಚಾರಧಾರೆಯ, ವಿಭಿನ್ನ ಪೀಳಿಗೆಯ ಲೇಖಕರು ವಿಮರ್ಶಕರು ಒಂದೇ ವೇದಿಕೆಯಲ್ಲಿ ವಿಚಾರ ವಿನಿಮಯ ಮಾಡಿಕೊಳ್ಳುವ ಅಪೂರ್ವ ಅವಕಾಶವನ್ನು ಜಿ. ಎಸ್.ಎಸ್ ಈ ವಿಚಾರ ಸಂಕಿರಣಗಳ ನೆಪದಲ್ಲೆ ಕಲ್ಪಿಸುತ್ತಿದ್ದರು. ತಾವು ಹಿನ್ನೆಯಲ್ಲೆ ನಿಂತು ಈ ಸಂಕಿರಣಗಳನ್ನು ಅವರು ಯೋಜಿಸುತ್ತಿದ್ದ, ನಿರ್ವಹಿಸುತ್ತಿದ್ದ ರೀತಿ, ನಾಡಿನ ಎಲ್ಲ ಲೇಖಕರನ್ನು ಅದರಲ್ಲಿ ತೊಡಗಿಸಿಕೊಳ್ಳುತ್ತಿದ್ದ ರೀತಿ ಆಶ್ಚರ್ಯಕರವಾದುದು. ತಮ್ಮದೆ ಖಚಿತ ನಿಲುವುಗಳನ್ನು ಹೊಂದಿಯೂ, ಬೇರೆ ಬೇರೆ ವಿಚಾರಧಾರೆಗಳಿಗೆ, ಚಿಂತನ ಕ್ರಮಗಳಿಗೆ ವಿಮುಖವಾಗದ ತೆರೆದ ಮನಸ್ಸು ಅವರದಾದ್ದರಿಂದಲೇ ಇಂಥ ವಿಚಾರ ಸಂಕಿರಣಗಳನ್ನು ಯಶಸ್ವಿಯಾಗಿ ನಿರ್ವಹಿಸುವುದು ಅವರಿಗೆ ಸಾಧ್ಯವಾದದ್ದು. ಇದೇ ಮನೋಧರ್ಮವನ್ನೇ ಅವರ ಕಾವ್ಯ ಮತ್ತು ವಿಮರ್ಶೆಯಲ್ಲೂ ನಾವು ನೋಡುತ್ತೇವೆ. ನವೋದಯ, ನವ್ಯ, ನವ್ಯೋತ್ತರ-ಬಂಡಾಯ-ದಲಿತ-ಹೀಗೆ ಬೇರೆ ಬೇರೆ ಸಂಪ್ರದಾಯಗಳ ಉದ್ದಕ್ಕೂ ನಿರಂತರವಾಗಿ ಬರೆದುಕೊಂಡು ಬಂದ ಕವಿ ಜಿ.ಎಸ್.ಎಸ್. ಅವರು. ನವೋದಯ ಸಂಪ್ರದಾಯದಲ್ಲಿ ಅವರು ತನ್ಮಯರಾದಂತೆ, ನವ್ಯ ಸಂಪ್ರದಾಯಕ್ಕೆ ಅವರು ಪೂರ್ಣ ತಮ್ಮನ್ನು ತೆತ್ತುಕೊಳ್ಳಲಿಲ್ಲ ನಿಜ. ಆದರೆ ನವ್ಯಕ್ಕೆ ಅವರು ತೀರ ವಿಮುಖರಾಗಲಿಲ್ಲವೆಂಬುದೂ ಅಷ್ಟೇ ನಿಜ. ಮತ್ತೆ ಈವತ್ತಿನ ಕಾವ್ಯ ಸಂಪ್ರದಾಯದಲ್ಲಿ ಅವರು ಹೆಚ್ಚು ತನ್ಮಯರಾಗಿ ತೊಡಗಿದಂತೆ ತೋರುತ್ತಿದೆ.

---

ಹೆಚ್. ಎಸ್. ವೆಂಕಟೇಶಮೂರ್ತಿ, ಕನ್ನಡ ಅಧ್ಯಾಪಕ, ಸೆಂಟ್‌ಜೋಸೆಫ್ ಕಾಮರ್ಸ್ ಕಾಲೇಜ್, ಬ್ರಿಗೇಡ್ ರಸ್ತೆ, ಬೆಂಗಳೂರು-25

ಜಿ. ಎಸ್. ಎಸ್. ಅವರ ವಿಮರ್ಶೆಗೆ ಗಟ್ಟಿಯಾದ ಕಾವ್ಯ ಮೀಮಾಂಸೆಯ ಅರಿವಿನ ಬೆಂಬಲವಿದೆ. ಈ ಕಾವ್ಯಮೀಮಾಂಸಾ ಜ್ಞಾನ ಭಾರತೀಯ ಮತ್ತು ಪಾಶ್ಚಾತ್ಯ ಕಾವ್ಯ ಚಿಂತನೆಗಳಿಂದ ಪುಷ್ಟವಾದುದು. ಭಾರತೀಯ ಪರಿಭಾಷೆಯಲ್ಲಿ ಚಿಂತಿಸುವ ಜಿ. ಎಸ್. ಎಸ್. ಅವರ ವಿಮರ್ಶೆ, ಆದಕಾರಣವೇ ಹೆಚ್ಚು ದೇಸೀಯವೂ, ವಿಭಿನ್ನವೂ ಆಗುತ್ತದೆ.

ಡಾ॥ ಜಿ. ಎಸ್. ಶಿವರುದ್ರಪ್ಪನವರನ್ನು ನಾನು ಸಂದರ್ಶಿಸುವಾಗ ಈ ಎಲ್ಲ ವಿಚಾರಗಳೂ ಹಿನ್ನೆಲೆಯಲ್ಲಿದ್ದುವು. ಅದೇ ಗುಂಗಿನಲ್ಲೇ ನಾನು ಜಿ. ಎಸ್. ಎಸ್. ಅವರ ಮನೆಗೆ ಹೋಗುವ ಸಿದ್ಧತೆಯಲ್ಲಿದ್ದಾಗ, ಹೈದರಾಬಾದಿನಿಂದ ಡಾ॥ ಕೆ. ವಿ. ತಿರುಮಲೇಶ್ ಅನಿರೀಕ್ಷಿತವಾಗಿ ನಮ್ಮಲ್ಲಿಗೆ ಬಂದದ್ದು ನನಗೆ ತುಂಬ ಸಂತೋಷ ನೀಡಿತೆಂದೇ ಹೇಳಬೇಕು. ಸಂದರ್ಶನದ ವಿಷಯ ಅವರಿಗೆ ತಿಳಿಸಿ. ಜೊತೆಗೆ ನೀವೂ ಬನ್ನಿ. ಚೆನ್ನಾಗಿರುತ್ತದೆ ಎಂದು ಅವರನ್ನೂ ಕರೆದುಕೊಂಡು ಜಿ. ಎಸ್. ಎಸ್. ಮನೆ ತಲುಪಿದಾಗ ಬೆಳಿಗ್ಗೆ 9 ಗಂಟೆ. ಮಧ್ಯೆ ಮಧ್ಯೆ ಕಾಫಿ, ತಿಂಡಿ ಧ್ವಂಸ ಮಾಡುತ್ತಾ ಗಂಟೆಗಟ್ಟಲೆ ನಾವು ಮಾತಾಡಿದ್ದು, ಆ ಮಾತಿನಲ್ಲಿ ಕಾವ್ಯ, ವಿಮರ್ಶೆ, ರಾಜಕೀಯ, ಸಂಗೀತ ಎಲ್ಲ ಬಂದುಹೋಗಿವೆ. ಪಂಪನಿಂದ, ಈಗ ಬರೆಯಲಿಕ್ಕೆ ಶುರು ಮಾಡಿರುವ ತರುಣ ಕವಿಯವರೆಗೆ ಹೆಸರುಗಳ ಪ್ರಸ್ತಾಪವಾಗಿದೆ. ಅದರಲ್ಲಿ ಜಿ. ಎಸ್. ಎಸ್. ಅವರ ಮನಸ್ಸನ್ನು ತಿಳಿಯಲಿಕ್ಕೆ ಸಹಾಯಕವಾಗುವ ಮುಖ್ಯ ಅಂಶಗಳನ್ನು ಮಾತ್ರ "ಶೂದ್ರ"ಕ್ಕೆ ನಾನು ದಾಖಲಿಸುತ್ತಿದ್ದೇನೆ.

೦ ೦ ೦ ೦

ಎಚ್.ಎಸ್.ವಿ : ಕಾವ್ಯ ಮೀಮಾಂಸೆಯ ಈ ತೌಲನಿಕ ಅಧ್ಯಯನದ ಸ್ಫೂರ್ತಿ ನಿಮಗೆ ದೊರತದ್ದು....? ಸ್ವಲ್ಪ ಹಿನ್ನಲೆ ತಿಳಿಸ್ತೀರಾ.......?

ಜಿ.ಎಸ್.ಎಸ್ : ಮುಖ್ಯವಾಗಿ ಕುವೆಂಪು ಅವರಿಂದ. ಅವರು ಪಂಪನನ್ನು ಪಾಠ ಮಾಡುವಾಗ, ಮಿಲ್ಟನ್‌ನನ್ನು ನಮಗೆ ಓದಿ, ಭಾರತೀಯ ಪಾಶ್ಚಾತ್ಯ ಕಾವ್ಯ ಚಿಂತನೆಗಳನ್ನೂ ನಮಗೆ ವಿವರಿಸಿ ಪಾಠ ಮಾಡ್ತಾ ಇದ್ದರು. ಅವರ ರಸೋವೈಸ, ತಪೋನಂದನ ಈ ದೃಷ್ಟಿಯಿಂದ ಬಹು ಮುಖ್ಯ ಕೃತಿಗಳು. ಆಮೇಲೆ ತಿ.ನಂ.ಶ್ರೀ–ಅವರ ಭಾರತೀಯ ಕಾವ್ಯ ಮೀಮಾಂಸೆ ಇವತ್ತಿಗೂ ಆಚಾರ್ಯಕೃತಿ. ಅವರ ಪಾಶ್ಚಾತ್ಯ ಕಾವ್ಯ ಮೀಮಾಂಸೆಯನ್ನೂ ಆಳವಾಗಿ ತಿಳಿದವರು. ಇಂಥ ಅಧ್ಯಾಪಕರ ಮಾತು, ಬರವಣಿಗೆಯಿಂದ, ಸಹಜವಾಗಿಯೇ ಪ್ರಾರಂಭದಿಂದಲೂ ಈ ತೌಲನಿಕ ಅಧ್ಯಯನ ನನಗೆ ಪ್ರಿಯವಾದ ಕ್ಷೇತ್ರವಾಯಿತು.

ಎಚ್.ಎಸ್.ವಿ. : ಕಾವ್ಯ ಮೀಮಾಂಸೆಗೆ ಸಂಬಂಧಿಸಿದಂತೆ ಭಾರತೀಯ ಮತ್ತು ಪಾಶ್ಚಾತ್ಯ ಚಿಂತನಾಕ್ರಮಗಳಲ್ಲಿ ಮೂಲಭೂತವಾದ ವ್ಯತ್ಯಾಸ ಏನಾದರೂ ಇದೆಯಾ....?

ಜಿ.ಎಸ್.ಎಸ್. : (ಸ್ವಲ್ಪ ಚಿಂತಿಸಿ) ಮೂಲಭೂತ ವ್ಯತ್ಯಾಸ ಇದೆ. ಪಾಶ್ಚಾತ್ಯ ಕಾವ್ಯ ಚಿಂತನೆ ಕವಿಯನ್ನು ಕೇಂದ್ರದಲ್ಲಿ ಇಟ್ಟುಕೊಂಡು ಯೋಚನೆ ಮಾಡುತ್ತೆ. ಭಾರತೀಯ ಕಾವ್ಯಚಿಂತನೆ ಓದುಗನನ್ನು ಕೇಂದ್ರದಲ್ಲಿ ಇಟ್ಟುಕೊಂಡು ಯೋಚನೆ ಮಾಡುತ್ತೆ. ಕಾವ್ಯದ ಓದು ಸಹೃದಯನ ಮೇಲೆ ಏನು ಪರಿಣಾಮ ಮಾಡುತ್ತೆ ಅನ್ನೋದೇ ನಮಗೆ ಮುಖ್ಯ.

ಎಚ್.ಎಸ್.ವಿ : ಭಾರತೀಯ ಕಾವ್ಯ ಮೀಮಾಂಸೆ ಹೆಚ್ಚೂ ಕಡಿಮೆ ಸಂಸ್ಕೃತ ಸಾಹಿತ್ಯದ ಕಾವ್ಯ ಮೀಮಾಂಸೆ. ನಮಗೆ ನಮ್ಮವೇ ಅಂದರೆ ಪ್ರಾಂತೀಯವಾದ ಕಾವ್ಯ ಮೀಮಾಂಸೆಯ ಚಿಂತನೆಗಳು ಇಲ್ಲವೇ....?

ಜಿ.ಎಸ್.ಎಸ್. : ಸಂಸ್ಕೃತ ಸಾಹಿತ್ಯದ ಪ್ರಭಾವದಲ್ಲೇ ಬಹಳಕಾಲ ನಾವು ಬರೆದದ್ದಲ್ಲವೇ ? ಆದ್ದರಿಂದ ಅಲ್ಲಿಯ ಚಿಂತನೆ ಇಲ್ಲಿಗೂ ಮಾನ್ಯ ಅಂತ ತಿಳೀಬೇಕು. ಆದರೂ ಸಂಸ್ಕೃತ ಭಾಷೆಗೂ, ನಮ್ಮ ಭಾಷೆಗೂ ಮೂಲಭೂತವಾದ ವ್ಯತ್ಯಾಸಗಳಿವೆ. ಉದಾಹರಣೆಗೆ ಪದಸಂಯೋಜನೆಯ ಕ್ರಮದಲ್ಲೇ. ಹಾಗಾಗಿ ಸಂಸ್ಕೃತದ ರೀತಿ ಸಿದ್ಧಾಂತವನ್ನು ನಮ್ಮ ಭಾಷಾ ಸಾಹಿತ್ಯಕ್ಕೆ, ಅದರಲ್ಲೂ ನಮ್ಮ ದೇಸೀ ಕಾವ್ಯ ಸಂಪ್ರದಾಯಕ್ಕೆ, ಪೂರ್ತಿಯಾಗಿ ಅನ್ವಯಿಸಿ ಮಾತಾಡಲಿಕ್ಕೆ ಬರುವುದಿಲ್ಲ.

ನಮ್ಮ ಕಾವ್ಯಗಳಲ್ಲಿ ನಮ್ಮವೇ ಕೆಲವು ಚಿಂತನೆಗಳು ಕಂಡಂತಿವೆ. ಹಳೇ ಕವಿಗಳ ಕಾವ್ಯದ ಪ್ರಾರಂಭದ ಪದ್ಯಗಳಲ್ಲಿ ಇಂಥ ಚಿಂತನೆ ಇರ್‍ತಾ ಇದ್ದುವು. ಆಧುನಿಕ ಕವಿಗಳಲ್ಲೂ ಕುವೆಂಪು, ಬೇಂದ್ರೆ, ಪು.ತಿ.ನ. ಮೊದಲಾದವರೂ ಕಾವ್ಯ ಚಿಂತನೆಯೇ ವಾಸ್ತವಾಗುಳ್ಳ ಪದ್ಯಗಳನ್ನು ಬರೆದಿದ್ದಾರೆ. ಈಚೆಗೆ ರಾಮಚಂದ್ರ ಶರ್ಮ ಕೂಡಾ ಅಂಥ ಕೆಲವು ಪದ್ಯ ಬರೆದಿದ್ದಾರೆ. ಈ ಎಲ್ಲ ಸಾಮಗ್ರಿ ಇಟ್ಟುಕೊಂಡು ನಾವು ಆ ಬಗ್ಗೆ ಯೋಚಿಸಬೇಕಾಗಿದೆ.

ಎಚ್.ಎಸ್.ವಿ. : ಕಾವ್ಯ ಮೀಮಾಂಸೆ ಕೂಡ ಒಂದು ಬೆಳೆಯುವ ಶಿಸ್ತೇ...? ರಸ ಧ್ವನಿ ತತ್ವದ ನಂತರ ಹೊಸ ಚಿಂತನೆಗಳೇ ನಮ್ಮಲ್ಲಿ ಬರ್‍ಲಿಲ್ಲ: ಅಲ್ವಾ....?

ಜಿ.ಎಸ್.ಎಸ್. : ಕುವೆಂಪು, ಪು.ತಿ.ನ. ಅನೇಕ ಹೊಸ ವಿಚಾರ ಹೇಳಿದ್ದಾರೆ. ಪು.ತಿ.ನ. ಅವರ ಭವನಿಮಜ್ಜನ, ಲಘಿಮಾಕೌಶಲ ಮೊದಲಾದ ಕಲ್ಪನೆ ನೋಡಿ.

ಎಚ್.ಎಸ್.ವಿ : ಕಾವ್ಯಾರ್ಥ ಚಿಂತನದಲ್ಲಿ...?

ಜಿ.ಎಸ್.ಎಸ್. : ನಮ್ಮ ಅಲಂಕಾರಿಕರು ಶೈಲಿಯ ಸಮಸ್ಯೆಯನ್ನು ನಮ್ಮ ಕವಿಗಳು ಎದುರಿಸಿದ್ದನ್ನು ಎಲ್ಲೂ ಪ್ರಸ್ತಾಪಿಸಿಲ್ಲ. ಕಾವ್ಯಾರ್ಥ ಚಿಂತದಲ್ಲಿ ಅದು ಪ್ರಸ್ತಾಪಿತವಾಗಿದೆ. ಉದಾಹರಣೆಗೆ ಪಂಪ ಸಂಸ್ಕೃತವನ್ನು ಎಷ್ಟರ ಮಟ್ಟಿಗೆ ಕನ್ನಡದೊಂದಿಗೆ ತರಬೇಕು ಎಂಬ ಸಮಸ್ಯೆಯನ್ನು ಎದುರಿಸಿದ್ದು.

ಧ್ವನಿತತ್ವಕ್ಕೆ ಸಂಬಂಧಿಸಿದಂತೆ, ಅಭಿದಾ, ಲಕ್ಷಣ, ವ್ಯಂಜನಗಳನ್ನು ಪಾಶ್ಚಾತ್ಯರ ಸೈನ್, ಸಿಂಬಲ್, ಇಮೇಜುಗಳ ಜೊತೆ ಇರಿಸಿ ನೋಡಿರೋದು ಇದೇ ಮೊದಲು. ಭಾರತೀಯ ಕಾವ್ಯ ಮೀಮಾಂಸೆಯ ಸಂದರ್ಭದಲ್ಲಿ ಸಾಹಿತ್ಯ ವಿಮರ್ಶೆ ಏಕೆ ಬೆಳೆಯಲಿಲ್ಲ ಎಂಬುದಕ್ಕೆ ಇರುವ ಕಾರಣಗಳ ಚರ್ಚೆ ಕೂಡ ಹೊಸ ಅಂಶ. ಹೀಗೇ ಇನ್ನೂ ಅನೇಕ ಅಂಶಗಳಿವೆ,...

ಎಚ್.ಎಸ್.ವಿ. : ಕಾವ್ಯ, ವಿಮರ್ಶೆ, ಕಾವ್ಯ ಮೀಮಾಂಸೆ ಇವುಗಳಲ್ಲಿ ನಿಮ್ಮ ಮುಖ್ಯ ಆಸಕ್ತಿ ?

ಜಿ.ಎಸ್.ಎಸ್. : (ನಗುತ್ತಾ) ಕಾವ್ಯಾನೇ...!

ಎಚ್.ಎಸ್.ವಿ. ; ನವೋದಯ, ನವ್ಯ, ನವ್ಯೋತ್ತರ—ಈ ಮೂರು ಹಂತಗಳಲ್ಲೂ ನೀವು ಬರ್‍ಕೊಂಡು ಬರ್‍ತಿದೀರಿ...ನವೋದಯ ಮತ್ತು ಈವತ್ತಿನ ಕಾವ್ಯದಲ್ಲಿ ನೀವು ಪೂರ್ತಿ ಸೇರಿದ ಹಾಗೆ ನವ್ಯ ಸಂಪ್ರದಾಯದಲ್ಲಿ ಬೆರೀಲಿಲ್ಲ ಯಾಕೆ...?

ಜಿ.ಎಸ್.ಎಸ್. : ನವೋದಯ ಪಾಶ್ಚಾತ್ಯ ಪ್ರೇರಣೆ ಪಡೆದೂ, ಅದು ಗಟ್ಟಿಯಾಗಿ ಈ ನೆಲದಲ್ಲಿ ಕಾಲೂರಿತ್ತು. ನವ್ಯ ಈ ನೆಲದಲ್ಲೇ ತನ್ನನ್ನು ಪೂರ್ತಿ ಬೆಳಕೊಳ್ಳಲಿಲ್ಲ ಅನ್ನಿಸತ್ತೆ. ಆದ್ರೆ ಈಗ ಬರೀತಿರೋರಿಗೆ ಸ್ಫೂರ್ತಿ, ಪ್ರೇರಣೆ, ಒತ್ತಾಯಗಳು ಸಂಪೂರ್ಣ ಈ ನೆಲದಿಂದಲೇ ಬಂದಿವೆ...ಕಾವ್ಯ ಮತ್ತೆ ನಮ್ಮದೇ ಪರಂಪರೆಗೆ ವಾಪಸ್ ಬಂದ ಹಾಗಾಗಿದೆ.

ಎಚ್.ಎಸ್.ವಿ. : ನವೋದಯಕ್ಕೆ, ನವ್ಯಕ್ಕೆ ತಮ್ಮದೇ ಆಕಾರ ಮತ್ತು ಥೀಮ್‌ಗಳು ಇದ್ದವು. ಈವತ್ತಿನ ಕಾವ್ಯಕ್ಕೆ ಅಂಥ ಭಿನ್ನ ಆಕಾರ, ಥೀಮ್‌ಗಳು ಇವೆಯಾ...?

ಜಿ.ಎಸ್.ಎಸ್ : ಈಗ ಪುರಾಣ, ಇತಿಹಾಸಾನ ಹೊಸ ದೃಷ್ಟೀಲೆ ನೋಡೋದು ಕಾಣ್ತದೆ, ಜನಪರ ದೃಷ್ಟಿ ಕಾಣ್ತದೆ. ತಿರುಮಲೇಶ್, ನೀವು ಲಕ್ಷ್ಮಣರಾವ್ ಶಿವಪ್ರಕಾಶ್, ಸಿದ್ದಲಿಂಗಯ್ಯ ಬರೆದ ಕಾವ್ಯ ನೋಡಬಹುದು.

ತಿರುಮಲೇಶ್ : ವ್ಯಕ್ತಿಗಳು, ಸ್ಥಳಗಳು ಮುಖ್ಯ ವಸ್ತು ಆಗ್ತಿವೆ....ನವೋದಯ, ನವ್ಯದ ವ್ಯಕ್ತಿ ಕವಿತೆಗಳಿಗೂ ಈವತ್ತು ಬರ್‍ತಿರೋ ಅಂಥ ಕವಿತೆಗಳಿಗೂ ವ್ಯತ್ಯಾಸ ಇದೆ....

ಜಿ.ಎಸ್.ಎಸ್ : ಮತ್ತೆ, ಅನೇಕ ಹಳೇ ಲಯಗಳನ್ನ, ರಿದಮ್‌ಗಳನ್ನ ಹೊಸ್ತರಾ ಬಳಸೋ ಪ್ರಯತ್ನ ನಡೀತಾ ಇದೆ ...ಭಾವಗೀತೆಗಳ ಗುಣ ಕಾಣ್ತಾ ಇದೆ.... ನಿರಾಶೆ, ಸಿನಿಕತನ ಕಾಣ್ತಾ ಇಲ್ಲ.... ಇದೆಲ್ಲ ಒಳ್ಳೆ ಬೆಳವಣಿಗೆ....

ತಿರುಮಲೇಶ್ : ಫ್ರೀವರ್ಸ್ ಬಿಟ್ಟಿದ್ದೂ ಒಳ್ಳೇದಾಯ್ತು. ಯಾಕಂದ್ರೆ ಅದು ಕವಿಗಳಿಗೆ ಸುಲಭ ಆಗ್ಬಿಟ್ಟಿತ್ತು....ಪ್ರತಿಭೆ ಚೆನ್ನಾಗಿ ಪ್ರಕಟವಾಗಬೇಕಾದ್ರೆ ಕೆಲವು ಬಿಕ್ಕಟ್ಟು ಇರೋದೇ ಒಳ್ಳೆದು....

ಜಿ.ಎಸ್.ಎಸ್ : ನನಗೇನೋ ಹಾಗನ್ಸಲ್ಲ....ಅಡಿಗರ ಕವಿತೆಗಳಲ್ಲಿ ನೋಡಿ....ಮುಕ್ತ ಛಂದ ಅಲ್ಲಿ ಎಷ್ಟು ಚೆನ್ನಾಗಿ ಬಂದಿದೆ....ಎಷ್ಟು ಬಿಗಿಯಾಗಿ ಬಂದಿದೆ.

ತಿರುಮಲೇಶ್ : ಅಲ್ಲೂ ಮೂಲಭೂತವಾದ ಲಯ ಇದ್ದೇ ಇದೆ.

ಎಚ್.ಎಸ್.ವಿ : ಕನ್ನಡ ಕಾವ್ಯದಲ್ಲಿ ವಿಶೇಷವಾದ ಹೊಸ ಲಕ್ಷಣಗಳು ಏನಾದ್ರೂ ಕಾಣ್ತವೆಯೂ....?

ಜಿ.ಎಸ್.ಎಸ್ : ಈಚೆಗೆ ಅನೇಕ ಜನ ಹೆಣ್ಮಕ್ಕಳು ಸೊಗಸಾದ ಕವಿತೆ ಬರೀತಾ ಇದಾರೆ ...ಇಷ್ಟು ಜನ ಒಳ್ಳೆ ಕವಯಿತ್ರಿಯರು ಹಿಂದೆ ಯಾವ ಕಾಲದಲ್ಲೂ ಕಂಡು ಬಂದಿರಲಿಲ್ಲ. ಇದು ಒಳ್ಳೇ ಲಕ್ಷಣ ಅಂದುಕೊಂಡಿದೀನಿ....ಹೇಮಾ, ಮುಕ್ತಾಯಕ್ಕ, ಉಷಾ, ಪ್ರತಿಭಾ ಇವರ ಕವಿತೆಗಳನ್ನು ನೋಡಿ....

o o o o

ಎಚ್.ಎಸ್.ವಿ : ವಿಮರ್ಶೆಗೆ ಸಂಬಂಧಿಸಿ ಮಾತಾಡೋದಾದ್ರೆ, ನಮ್ಮ ದೊಡ್ಡ ವಿಮರ್ಶಕರೆಲ್ಲ ಒಂದು ಸಂಪ್ರದಾಯದೊಂದಿಗೆ ತಮ್ಮನ್ನೂ ಸಮೀಕರಿಸಿಕೊಂಡ್ರ ಬರೆದೋರು ...ನವೋದಯದ ಕುರ್ತಕೋಟಿ ಅವರನ್ನೋ, ನವ್ಯದ ಅನಂತ ಮೂರ್ತಿ, ಎಂ.ಜಿ.ಕೆ. ಅವರನ್ನೋ ಉದಾಹರಣೆಗೆ ನೋಡಬಹುದು. ಆದ್ರೆ ಇವತ್ತು ಬರ್‍ತಿರೋ ಹೊಸ ವಿಮರ್ಶಕರು ಯಾವುದೇ ಸಂಪ್ರದಾಯದೊಂದಿಗೂ ತಮ್ಮನ್ನು ಸಮೀಕರಿಸಿಕೊಂಡವರಲ್ಲ. ಇದು ವಿಶೇಷ ಲಕ್ಷಣ ಅಲ್ವಾ....?

ಜಿ.ಎಸ್.ಎಸ್ : ನೀವು ಹೇಳೋದು ನಿಜ. ಒಬ್ಬ ವಿಮರ್ಶಕ ಒಂದು ಸಾಹಿತ್ಯ ಸಂಪ್ರದಾಯದೊಂದಿಗೆ ತನ್ನನ್ನು ಸಮೀಕರಿಸಿಕೊಳ್ಳೋಕೆ ತಾನೂ ಸ್ವತಃ ಸೃಜನಶೀಲ ಲೇಖಕನಾಗಿರೋದು ಕಾರಣ ಇರಬಹುದು... ಅಥವಾ ಆ ಸಂಪ್ರದಾಯದ ವಿಚಾರಗಳಿಂದ ತುಂಬ ಪ್ರಭಾವಿತನಾಗಿರೋದು ಕಾರಣ ಇರಬಹುದು. ಅದು ತಪ್ಪು ಅಂತ ಹೇಳೋದಕ್ಕೂ ಬರೋದಿಲ್ಲ... ಯಾಕೆಂದ್ರೆ ವಿಮರ್ಶೆಯ ಬಹಳ ದೊಡ್ಡ ಮಾತುಗಳು ಅಂಥ ವಿಮರ್ಶಕರಿಂದಲೂ ಬಂದಿವೆ. ಆದ್ರೆ ಇವತ್ತು ಬರಿಯೋ ತರುಣ ವಿಮರ್ಶಕರು ಒಂದು ಸಂಪ್ರದಾಯದೊಂದಿಗೆ ತಮ್ಮನ್ನು ಸಮೀಕರಿಸಿಕೊಳ್ಳದೆ ಇರೋದು ಬಹಳ ಒಳ್ಳೇ ಲಕ್ಷಣ ... ಡಿ. ಆರ್. ನಾಗರಾಜ್, ಕೆ. ವಿ. ನಾರಾಯಣ, ಎಚ್. ಎಸ್. ರಾಘವೇಂದ್ರರಾವ್, ಭಗವಾನ್, ನರಹಳ್ಳಿ ಬಾಲಸುಬ್ರಮಣ್ಯ ಮೊದಲಾದ ತರುಣರು ಆ ದೃಷ್ಟಿಯಿಂದ ಬಹಳ ಮುಖ್ಯರು ... ಮತ್ತೆ ಇವರೆಲ್ಲ ಕೇವಲ ವಿಮರ್ಶಕರೂ ಅನ್ನೋದೂ ಮುಖ್ಯ....

o o ತ o

ಎಚ್.ಎಸ್.ವಿ : ಸಿನಿಮಾ, ಕ್ಯಾಸೆಟ್, ಟಿ.ವಿ. ಮೊದಲಾದ ಜನಪ್ರಿಯ ಮಾಧ್ಯಮಗಳ ನಡುವೆ ನಾವು ಕವಿತೆ ಬರೀತಾ ಇದ್ದೀವಿ ... ಇದ್ರಿಂದ ಕಾವ್ಯ ಬಹಳ ಇಕ್ಕಟ್ಟಿನಲ್ಲಿ ಇದೆ ಅಂತ ನಿಮಗೆ ಅನ್ನಿಸ್ತಿದೆಯಾ....?

ಜಿ.ಎಸ್.ಎಸ್ : ಹಾಗೇನೂ ಅನ್ನಿಸ್ತಿಲ್ಲ. ಇಷ್ಟೆಲ್ಲದರ ನಡುವೆಯೂ ಕಾವ್ಯದ ರುಚಿ ಹತ್ತಿರೋದು ಕಾವ್ಯಕ್ಕೆ ಬಂದೇ ಬರ್ತಾರೆ. ಕಾವ್ಯ ತನ್ನ ಪಟ್ಟು ಬಿಟ್ಟುಕೊಡದೆ ಈ ಜನಪ್ರಿಯ ಮಾಧ್ಯಮಗಳನ್ನು ಬಳಸಿಕೊಂಡು ಹೆಚ್ಚು ಜನಕ್ಕೆ ತಲಪಲು ಪ್ರಯತ್ನಿಸೋದು ಕೂಡ ತಪ್ಪಲ್ಲ...

ಎಚ್.ಎಸ್.ವಿ : ಕಾವ್ಯಕ್ಕೆ ಊನವಾಗದ ಹಾಗೆ ಅದನ್ನು ತಮ್ಮ ಮಾಧ್ಯಮದಲ್ಲಿ ಮಂಡಿಸೋ ಅಂಥ ಪ್ರತಿಭಾವಂತರು ಆ ಮಾಧ್ಯಮಗಳಲ್ಲಿ ಇದ್ದಾರೆ ಅನ್ನಿಸ್ತಿದೆಯಾ....?

ಜಿ.ಎಸ್.ಎಸ್ : ಖಂಡಿತ ಇದಾರೆ. ಸಿನಿಮಾದಲ್ಲಿ ಪುಟ್ಟಣ್ಣ ಕಣಗಾಲ್ ಅದ್ಭುತವಾಗಿ ಆ ಕೆಲಸ ಮಾಡ್ತಾ ಇದ್ದು.... ಕ್ಯಾಸೆಟ್ ಮಾಧ್ಯಮದಲ್ಲಿ ಸಿ. ಅಶ್ವತ್ಥ್, ಅನಂತಸ್ವಾಮಿ ಸೊಗಸಾದ ಕೆಲಸ ಮಾಡ್ತಾ ಇದಾರೆ.

ಎಚ್.ಎಸ್.ವಿ : ಆದ್ರೆ ಗಂಭೀರ ಕಾವ್ಯದ ಈ ಮಾಧ್ಯಮಗಳು ಹಿಡೀಲಾರವು... ಅವಕ್ಕೆ ಸರಳವಾದ ಗೀತೆಗಳು ಬೇಕಾಗತ್ತೆ...

ಜಿ.ಎಸ್.ಎಸ್ : ಗೀತೆಗಳನ್ನು ಬರೆಯೋದು ತಪ್ಪಲ್ಲ. ಆದ್ರೆ ಹಾಡಿಗೇ ಅಂತ ಹಾಡು ಬರೀಬಾರ್ದು, ಅಷ್ಟೆ. ಈಗ ಸಿನಿಮಾಗೀತೆಗಳು ನೋಡಿ. ಏನಿದೆ ಅದರಲ್ಲಿ ? ಎಷ್ಟು ಅಗ್ಗವಾಗಿವೆ ಅವು ? ಅವನ್ನು ಕೌಂಟರ್ ಮಾಡೋದಕ್ಕೆ ಕ್ಯಾಸೆಟ್ ಸಂಸ್ಕೃತಿಯನ್ನು ನಾವು ಬಳಸಿಕೊಳ್ಳಬೇಕು...

o o o

ಎಚ್.ಎಸ್.ವಿ : ಸಾಹಿತ್ಯ ಬಿಟ್ಟು, ನಿಮ್ಮ ತೀವ್ರವಾದ ಬೇರೆ ಆಸಕ್ತಿ ಏನು....?

ಜಿ.ಎಸ್.ಎಸ್ : (ನಗುತ್ತಾ) ಜಗಳ ಆಡೋದು....!

ಎಚ್.ಎಸ್.ವಿ : ಅದನ್ನು ಬಿಟ್ಟು....? (ನಗು)

ಜಿ.ಎಸ್.ಎಸ್ : ಸಂಗೀತ. ಹಿಂದೂಸ್ತಾನಿ ಸಂಗೀತ ನನಗೆ ತುಂಬ ಇಷ್ಟ. ಮನ್ಸೂರ್, ಜೋಷಿ ಹೀಗೆ. ವಾದ್ಯ ಸಂಗೀತ ನನಗೆ ಇನ್ನೂ ಇಷ್ಟ. ರವಿಶಂಕರ್‌ರ ಸಿತಾರ್, ಅಮ್ಜಾದ್ ಆಲಿಖಾನ್ ಅವರ ಸರೋದ್. ಸಂಗೀತ ಬಿಟ್ರೆ ತತ್ವಶಾಸ್ತ್ರ ಇಷ್ಟ. 'ವಿಲ್‌ಡುರಾಂಟ್' ನನ್ನ ಮೆಚ್ಚಿನ ಲೇಖಕ. ಅವನ ಸ್ಟೋರಿ ಆಫ್ ಫಿಲಾಸಫಿ. ವಿವೇಕಾನಂದರ ವ್ಯಕ್ತಿತ್ವ ನನ್ನ ಮೇಲೆ ಗಾಢ ಪ್ರಭಾವ ಬೀರಿದೆ... ಜೆ. ಕೃಷ್ಣಮೂರ್ತಿ ಕೂಡ.... ಲೇಖಕರಲ್ಲಿ ಲಾರೆನ್ಸ್ ಮತ್ತು ಇಲಿಯಟ್....

ಎಚ್.ಎಸ್.ವಿ : ಲೌಕಿಕವಾಗಿ ನಿಮ್ಮ ಮೇಲೆ ಪ್ರಭಾವ ಬೀರಿದ ವ್ಯಕ್ತಿಗಳು ?

ಜಿ.ಎಸ್.ಎಸ್ : ಕುವೆಂಪು, ತ.ಸು, ಶ್ಯಾಮರಾಯರು, ತಿ.ನಂ.ಶ್ರೀ. ಅವರು....

ಎಚ್.ಎಸ್.ವಿ : ಎಂಥ ಬದುಕು ನಿಮಗೆ ತುಂಬ ಇಷ್ಟ...?

ಜಿ.ಎಸ್.ಎಸ್ : ಶ್ರದ್ಧೆಯಿಂದ ಕೆಲಸ ಮಾಡೋ ಜನ, ಪ್ರಾಮಾಣಿಕವಾಗಿ, ಕೆಲಸ ಕದಿಯದೆ ದುಡಿಯೋ ಜನ ನನಗೆ ತುಂಬ ಇಷ್ಟ. ನಾನೂ ಹಾಗೇ ದುಡೀತಾ ಇರಬೇಕು ಅನ್ನೋದು ನನ್ನ ಆಸೆ....

ಎಚ್.ಎಸ್.ವಿ : ಈಗ ನಿವೃತ್ತರಾಗ್ತಿದೀರಿ. ನಿಮ್ಮ ಯೋಜನೆಗಳೇನು...?

ಜಿ.ಎಸ್.ಎಸ್ : ತುಂಬ ಓದ್ಬೇಕು. ಓದಬೇಕಾದ್ದು ಬೇಕಾದಷ್ಟಿದೆ. ತುಂಬ ತಿರಗ್ಬೇಕು. ಪ್ರಯಾಣ ಮಾಡೋದು ನನಗೆ ಬಾಲ್ಯದಿಂದಲು ಬಾದಿರೋ ಹುಚ್ಚು. ಕನ್ನಡ ವಿಮರ್ಶೆಯ ಚರಿತ್ರೆ ಬರೀಬೇಕು–ಅನ್ನೋ ಆಸೆ ಇದೆ. ಕನ್ನಡ ಕಾವ್ಯ ಚಿಂತನೆಯನ್ನು ಕುರಿತೂ ಒಂದು ಗ್ರಂಥ ಬರೆಯುವ ಆಸೆ ಇದೆ...

ಎಚ್.ಎಸ್.ವಿ : ಸದ್ಯ ಏನಾದ್ರೂ ಬರೀತಾ ಇದೀರಾ ?

ಜಿ.ಎಸ್.ಎಸ್ : ನನ್ನ ಹಿಮಾಲಯ ಯಾತ್ರೆ ಕುರಿತು 'ಗಂಗೆಯ ಶಿಖರಗಳಲ್ಲಿ' ಅಂತ ಒಂದು ಪ್ರವಾಸ ಕಥನ ಬರೆದು ಮುಗಿಸಿದೀನಿ. ಕೇವಲ ಟ್ರಾವಲಾಗ್ ಅಲ್ಲ. ಹೊಸ್ತರಾ ಇದೆ ಅಂದುಕೊಂಡಿದೀನಿ. ಅದು ಅಚ್ಚಾಗಿ ಹೊರಗೆ ಬರ್ತಾ ಇದೆ. (ಈ ಕೃತಿ ಈಗ ಪ್ರಕಟವಾಗಿದೆ-ಲೇ.)

ಎಚ್.ಎಸ್.ವಿ : ಈ ವಯಸ್ಸಿನಲ್ಲೂ ನಿಮಗಿರೋ ಕಾರ್ಯಶ್ರದ್ಧೆ, ಉತ್ಸಾಹ ನನಗೆ ಆಶ್ಚರ್ಯ ತರ್ತಾ ಇದೆ... ನಿಮ್ಮ ಯೋಜನೆಗಳನ್ನು ನೀವು ಕಾರ್ಯಗತ ಮಾಡೋದ್ರಲ್ಲಿ ಸಂಶಯಾನೇ ಇಲ್ಲ.... ಅವೆಲ್ಲ ಕನ್ನಡ ಓದುಗರಿಗೆ ಬೇಗ ಸಿಗ್ಲಿ ಅಂತ ಹಾರೈಸ್ತೀನಿ–ಸರ್.... ನಮಸ್ಕಾರ...

o o o

ನಾವು ಶಿವರುದ್ರಪ್ಪನವರನ್ನು ಬೀಳ್ಕೊಂಡು ಮನೆಗೆ ಬರುತ್ತಿದ್ದಾಗ ತಿರುಮಲೇಶ್ ಹೇಳಿದರು— "ಜಿ.ಎಸ್.ಎಸ್. ತುಂಬ ಗಟ್ಟಿ ವ್ಯಕ್ತಿ. ಅವರ ಜತೆ ಮಾತಾಡೋದು ತುಂಬ ಒಳ್ಳೆ ಅನುಭವ—

ಅದು ನಿಜ. ಈಚೆಗೆ ವಯಸ್ಸಿನ ಪರಿಣಾಮವಾಗಿ, ಗಂಟೆಗಟ್ಟಲೆ ಒಂದೇ ಸಮನೆ ಬರೆದು, ಸೊಂಟ ನೋವು ಎಂದು ಅವರು ವದ್ದಾಡುವುದು ನೋಡಿದ್ದೇನೆ. ಗ್ಯಾಸ್ಟ್ರಿಕ್ ಇತ್ಯಾದಿ ಈತಿಬಾಧೆಗಳು ಅವರಿಗೆ ಕೊಂಚ ತೊಂದರೆ ಕೊಡುವುದುಂಟು. ಆದರೆ ಈ ಯಾವ ಸಮಸ್ಯೆಗಳೂ ಅವರ ಕ್ರಿಯಾಶೀಲತೆಯನ್ನು ಕುಗ್ಗಿಸಿಲ್ಲ. ಅವರು ಸ್ವಲ್ಪ 'ಮೂಡಿ' ಎಂಬುದು ಕೆಲವರ ಅನಿಸಿಕೆ. ಶೀಘ್ರಕೋಪಿ ಎಂದು ದೂರುವವರಿದ್ದಾರೆ. ಆದರೆ ಈ ಎಲ್ಲವೂ ಜೀವಂತ ವ್ಯಕ್ತಿಯ ಲಕ್ಷಣಗಳೆಂದೇ ನನ್ನ ನಂಬಿಕೆ. ಮೇಲ್ನೋಟಕ್ಕೆ ಸ್ವಲ್ಪ 'ಬಿಗಿ' ಎಂಬಂತೆ ಕಾಣುವರಾದರೂ, ಒಮ್ಮೆ ಒಪ್ಪಿಕೊಂಡರೆ, ಸಂಪೂರ್ಣ ಮುಕ್ತವಾಗುವ ಸ್ವಭಾವ ಅವರದ್ದು. ಅವರ ತೋರಿಕೆಯ ಸಿಟ್ಟು ಸೆಡವುಗಳ ಹಿಂದೆ ನೋಯುವ, ಅನುಕಂಪಿಸುವ, ತೀವ್ರವಾಗಿ ಚಿಂತಿಸುವ ಒಂದು ಜೀವಂತ ಮನಸ್ಸು ಇದೆ. ಅಂಥ ಮನಸ್ಸು ಯಾರಿಗೆ ತಾನೆ ಪ್ರಿಯವಾಗದು ?

ಬ್ರೆಕ್ಟ್ ನಾಟಕಗಳಿಂದ-

# ಪ್ರೀತಿಯ ಚುಟುಕಗಳು

ಒಂದು

ಮುದ್ದಿನಲಿ ಅಪ್ಪಿದ ತೋಳು ತಟ್ಟನೆ ಬಿಗಿದು
ಹಿಂಸ್ರ ಸಂಕೋಲೆಯಾಗುವುದು
ಪ್ರೀತಿ ನಿಟ್ಟುಸಿರು ತಟ್ಟನೆ ಬದಲಿ
ಭೀತಿಯೇ ಕಿರುಚಿದಂತಾಗುವುದು

ಸುತ್ತತ್ತಲಿವೆ ಹದ್ದು ಆಕಾಶ ತುಂಬ
ಕೇಳುವಿರೊ-ಯಾತಕ್ಕೆ ?
ಹುಡುಗಿ ಹೊರಟಿದ್ದಾಳೆ ಪ್ರಿಯನನ್ನ ಕಾಣಲಿಕ್ಕೆ

ಎರಡು

ಪ್ರೀತಿಸ್ತೇನೆ-ಪ್ರೀತಿಸಿದೋನ
ಜೊತೆಗೇನೇ ನಡೆದುಬಿಡ್ತೇನೆ

ಖರ್ಚುವೆಚ್ಚ ಎಣಿಸೋದಿಲ್ಲ
ಮುಂದೇನಂತ ಗುಣಿಸೋದಿಲ್ಲ
ಅವನಿಗ್ ಪ್ರೀತಿ ಉಂಟೋ ಇಲ್ವೋ
ಹಾಗಂತ್ ಮನಸ್ಸು ಕುಣಿಸೋದಿಲ್ಲ

ಏನೂ ಬೇಡ-ಪ್ರೀತಿಸಿದೋನ
ಜೊತೆಗೇನೇ ನಾ ನಡೆದುಬಿಡ್ತೇನೆ

ಮೂರು

ಸುಂಟರಗಾಳಿ ತಾತೆ ಎದುರು
ನೊಡದ ಕೂಡ ಮಾತಾಡ್ಕೊಂಡು
ಆಕಾಶದಗಲ ಹಾಯೋ ಗಿಡುಗ
ಯಾಂಗ್‌ಸುನ್-ನನ್ನ ಪ್ರೀತಿ ಹುಡುಗ

---

ಕೆ ವಿ ಸುಬ್ಬಣ್ಣ, ಹೊನ್ನೆಸರ, ಹೆಗ್ಗೋಡು ಸಾಗರ(ತಾ) ಶಿವಮೊಗ್ಗ ಜಿಲ್ಲೆ

ಆಕಾಶದಲ್ಲಿ ಹಾರೋದಂದ್ರೆ
ಧೈರ್ಯ ಬೇಕು ಆಸೆ ಬೇಕು
ಸುಂಟರಗಾಳಿ ತಂತೆ ಎದುರು
ಮೋಡದ ಕೂಡ ಮಾತಾಡ್ಕೊಂಡು
ಆಕಾ–ಶದಗಲ ಹಾಯೋದಂದ್ರೆ
ಧೈರ್ಯ ಬೇಕು ಧಾವತಿ ಬೇಕು
ದೂರಾನ್‌ದೂರದ ದೇಶಗಳಿಂದ
ಸ್ನೇಹಪ್ರೀತಿ ಕಾಗದ ಪತ್ರ
ರಾಶಿರಾಶಿ ತುಂಬಿಡ್ಕೊಂಡು
ಆಕಾಶದಗಲ ಹಾಯೋದಂದ್ರೆ
ಎಲ್ಲೆಲ್ಲಿ ತಂದು ಹಂಚೋದಂದ್ರೆ
ಧೈರ್ಯ ಬೇಕು ಧಾವತಿ ಬೇಕು

ದೂರಾನ್‌ದೂರದ ದೇಶಗಳಿಂದ
ಸ್ನೇಹಪ್ರೀತಿ ಕಾಗದಪತ್ರ
ತರ್ತಾನೆ ನೋಡಿ ಆಕಾಶದಲ್ಲಿ
ಅವನೇ ಯಾಂಗ್‌ಸುನ್–ನನಗೆ ಬೇಕಾದೋನ್

## ನಾಲ್ಕು

ಈಗ ನಾನು ಶ್ರೀಮಂತೆ
ಒಬ್ಬಳೇ ನಡಕೋತ್ ಹೋಗ್ತೇನೆ
ಒಬ್ಬಳೇ ನಿದ್ದೆ ಮಾಡ್ತೇನೆ
ಇಡೀ ವರ್ಷ ಬೇಕಾದ್ರೂನೂ
ಯಾವ್ದೇ ಗಂಡಸಿನ ಹಂಗೇ ಇಲ್ದೆ
ಇದ್ಕೊಂಡ್ ಬಿಡ್ತೇನೆ ನಾನೇ ನಾನು

## ಐದು

ಯಾರೂ ಕೂಡ ಹಾಳಾಗದ್ದಾಗೆ
ತಾನೂ ಕೂಡಾ ಹಾಳಾಗದ್ದಾಗೆ
ಎಲ್ಲಾರೀಗೂ ಹರ್ಷಕೊಟ್ಟು



ಕೊಪ್ರ

ತಾನೂ ಕೂಡಾ ಹರ್ಷ ತೊಟ್ಟು
ನಲೀಬೇಕು, ಅದೇ ಸ್ವರ್ಗ
ಇನ್ನೇನಿದೆ ಅದು ಬಿಟ್‌ಬಿಟ್ಟು ?

ಆರು

ಇಲ್ಲದಿದ್ದರೇನಂತೆ ಪಾದ್ರಿ ಪುರಾಣ
ಕಾಲ್ಗೆಜ್ಜೆ ಝಣಝಣ ಮಂಗಲ ತೋರಣ
ಯಾರಾದರೇನಂತೆ ನಂಟರು ಕುಲಗೋತ್ರ
ಯಾರು ಕೊಟ್ಟರು ಸರಿಯೆ ಜರತಾರಿ ವಸ್ತ್ರ
ತಿಂದಾಯ್ತು ತಟ್ಟೆಯ ಹೊರಗೆ ಎಸೆಯೋಣಂತೆ
ಸದ್ಯ ಇನ್ಯಾತಕ್ಕೆ ಅನ್ನ ಸಾರಿನ ಚಿಂತೆ
ನಗರನಗರಗಳಲ್ಲಿ ನಗರರಾಶಿಗಳಲ್ಲಿ
ಪ್ರೇಮಕ್ಕೆ ಯಾವತ್ತೂ ಚ್ಯುತಿಯಿಲ್ಲ
ಪ್ರೇಮಕ್ಕೆ ಯಾವತ್ತೂ ಚ್ಯುತಿಯಿಲ್ಲ-ಇದ್ದರೂ
ಕಿಂಚಿತ್ ಇರಬಹುದು ಗೊತ್ತಿಲ್ಲ.

ಛಾಯೆ : ಕೆ.ವಿ.ಸು.

## ಬಾಗಿಲು

ಬಾಗಿಲೊ ಯಮಪುರದ ಹೆಬ್ಬಾಗಿಲೊ
ಎಂಬ ಭೀತಿಯೆ ಪೂರ ಮನಸಿನೊಳಗೆ
ಕತ್ತಲೊ ಯಮಗತ್ತಲೊ
ಎಂಬ ಸಾವಿನ ಸುಳುಹು ಮನಸಿನೊಳಗೆ
ಮುಚ್ಚಿರುವ ಕದದಾಚೆ
ಹರಡಿಹುದು ಯಮಗತ್ತಲೆ
ಗೂಢ ನಿಗೂಢ ಭಯೋತ್ಪಾದಕತೆಯ
ಕ್ರೂರ ಅಜ್ಞಾತ ನೆಲೆ !

ಮಹೇಶ್ವರಿ. ಯು, ಕನ್ನಡ ವಿಭಾಗ, ಸರಕಾರಿ ಕಾಲೇಜು, ಕಾಸರಗೋಡು, ಅಂಚೆ: ವಿದ್ಯಾನಗರ

ಕದದಾಚೆ ಇರುವರು
ದುಃಸ್ವಪ್ನದಾಳುಗಳು,
ಹುಲುಮಾನುಜರು–
'ಯಾವ ಗಳಿಗೆಯು ಹೊತ್ತು
ಹೊಂಚಿ ಬರುವುದು ಮಿತ್ತು
ಹಾರೆ ಪಿಕ್ಕಾಸುಗಳ ಅವತಾರವೆತ್ತು'
ಎಂಬ ಭೀತಿಯ ಭರದಿ
ಉಸಿರಬಿಡುವುದ ಕೂಡ ಮರೆತು
ಈ ಬಾಗಿಲೊಂದಿದೆ ಮಧ್ಯೆ
ಆ ಕಡೆಗು ಈ ಕಡೆಗು ನೋಡುತ್ತ–
ದ್ವಿಮುಖ ನೀತಿಯ ಮೆರೆದು !
ಈ ರಕ್ಷಕನೆ ಹೀಗಿರಲು,
ಆರಕ್ಷಕನ ಅಭಯವುಂಟೆ ?
ಉಂಟೆ ?

—ಮಹೇಶ್ವರಿ ಯು.

# ಮಾಸ್ತಿಯವರ ಕಾದಂಬರಿಗಳಲ್ಲಿ ಮಾನವೀಯತೆ

—ಕಾ. ತ. ಚಿಕ್ಕಣ್ಣ

ಒಬ್ಬ ಸೃಜನಶೀಲ ಲೇಖಕ ಐತಿಹಾಸಿಕ ವಿಷಯವನ್ನು ತನ್ನ ಕಥೆಗೆ ಆಯ್ಕೆ ಮಾಡಿಕೊಂಡಾಗ, ಅವನು ಇತಿಹಾಸಕ್ಕೆ ಎಷ್ಟು ನಿಷ್ಠನಾಗಿರಬೇಕು ಅಥವಾ ಅಲ್ಲ ಎಂಬ ಬಗ್ಗೆ ಸಾಕಷ್ಟು ಚರ್ಚೆಯಾಗಿದೆ; ಆಗುತ್ತಿದೆ. ಆದರೆ, ಮಾಸ್ತಿಯವರ ಐತಿಹಾಸಿಕ ಕಾದಂಬರಿ ಪಾತ್ರಗಳಲ್ಲಿ ಕಂಡುಬರುವ ಮಾನವೀಯತೆಯ ಬಗ್ಗೆ ಮಾತನಾಡಬೇಕಿರುವ ನನಗೆ, ಈ ಚರ್ಚೆಯ ಅಗತ್ಯವಿಲ್ಲವಾದರೂ ಲೇಖಕನಿಗಿರಬೇಕಾದ ಸಂಪೂರ್ಣ ಸ್ವಾತಂತ್ರ್ಯವನ್ನು ಒಪ್ಪಿಕೊಂಡು ಕೂಡ. ಈ ಸ್ವಾತಂತ್ರ್ಯದ ವಾದವನ್ನೇ ಒಂದು ಸಿದ್ಧಾಂತ ಮಾಡಿ ವಸ್ತುವಿಗೆ ಅಪಚಾರ ಮಾಡುವ, ಮಾನವೀಯ ಸಂಬಂಧಗಳನ್ನು

ಕಾ. ತ. ಚಿಕ್ಕಣ್ಣ, ಎ, 85/1. ಜೀವನಬಿಮಾನಗರ, ಬೆಂಗಳೂರು-75

ತಿರುಚಿಹಾಕಿ ಬಿಡುವ ಅಪಾಯವನ್ನು ನಾವು ಮರೆಯಬಾರದು. ಈ ಮಾತನ್ನು ಮಾಸ್ತಿಯವರ ಕಾದಂಬರಿಗಳಿಗೂ ಅನ್ವಯಿಸಿ ಹೇಳುತ್ತಿದ್ದೇನೆ.

ಮಾಸ್ತಿಯವರಿಗೆ ಸನಾತನ ಧರ್ಮದಲ್ಲಿರುವ ನಂಬಿಕೆ ಮತ್ತು ಅದನ್ನು ಇತರರಲ್ಲಿಯೂ ಅವರು ಬಯಸುವ ಬಗೆಯನ್ನು ಕಾಣಬಹುದು. ಇದನ್ನು ಅವರ 'ಚಿಕ್ಕವೀರರಾಜೇಂದ್ರ' ಅಥವಾ 'ಚೆನ್ನಬಸವನಾಯಕ' ಇಲ್ಲವೆ 'ಸುಬ್ಬಣ್ಣ'ನಲ್ಲಿ ಸ್ಪಷ್ಟವಾಗಿ ಗಮನಿಸಬಹುದು. ಚಿಕ್ಕವೀರರಾಜನನ್ನು ಮದುವೆಯಾಗಬೇಕಾಗಿ ಬಂದ ಸಂದರ್ಭದಲ್ಲಿ ಗೌರಮ್ಮನ ವಿಷಯದಲ್ಲಿ ಹೇಳುತ್ತಾರೆ: "ಹೇಗೊ ಹೆಂಡಿರಾಗಿ ಬಾಳುವುದು ಎಲ್ಲ ಹೆಣ್ಣಿನ ಹಣೆಯಲ್ಲಿ ಬರೆದದ್ದು ...ಹಣೆಬರಹ ಎನ್ನುವುದಿದ್ದೇ ಇದೆ. ಸಹಿಸಿಕೊಳ್ಳಬೇಕು" (ಪು. 41). ಇಲ್ಲಿ, ಆ ಗಂಡನ್ನು ಒಲ್ಲದ ಅಥವಾ ಒಲಿಯಬೇಕಾಗಿ ಬಂದ ತನ್ನ ಅಸಹಾಯಕತೆಯ ಮಾನಸಿಕ ತುಡಿತದ ಚಿತ್ರಣ ಮೂಡಿಬಂದಿದ್ದರೆ ಈ ಸನ್ನಿವೇಶ ಬಹು ಆಪ್ತವಾಗುತ್ತಿತ್ತೇನೋ.

ಚಿಕವೀರರಾಜ ಆಂಗ್ಲರ ನಿಯೋಗಿಗಳನ್ನು ಸೆರೆಯಲ್ಲಿಟ್ಟ ಒಂದು ಸಂದರ್ಭವನ್ನು ಮಾಸ್ತಿಯವರು ವಿಮರ್ಶಿಸುವುದು ಹೀಗೆ: "ಇದೆಲ್ಲ ಸರಿಯೆ, ಆದರೆ ಇದನ್ನು ತಪ್ಪಿಸುವುದಕ್ಕೆ ಏನು ಮಾಡಬಹುದು? ಇಂಥ ಸಂದರ್ಭದಲ್ಲಿ ಜೀವನವೆನ್ನುವುದು ವಿಧಾತ ಬರೆದಿಟ್ಟ ಒಂದು ನಾಟಕದಂತೆ ಆಗಿಬಿಡುತ್ತದೆ, ಕವಿ ಬರೆದು ಮುಗಿಸಿ ಆಡಿ ಎಂದು ಕೈಗೆಕೊಟ್ಟಿರುವ ನಾಟಕ; ನಟ ಅದನ್ನು ಆಡಬಹುದು ಹೊರತು ಬೇರೆ ಮಾಡಲು ಬರುವುದಿಲ್ಲ. ಇದನ್ನೇ ಪೂರ್ವಿಕರು ವಿಧಿಲಿಖಿತ ಎಂದಿರಬಹುದು...(ಪು. 375). ಬಹು ಇಕ್ಕಟ್ಟಿನ ಇಂಥ ಸನ್ನಿವೇಶವೂ ಕೂಡ ವಿಧಿಲಿಖಿತದಲ್ಲಿ ಮುಗಿದುಬಿಡುತ್ತದೆ. ಚೆನ್ನಬಸವನಾಯಕ ಕಾದಂಬರಿಯಲ್ಲಿ ಒಡೆಯರಿಗೆ ಎರಡನೆ ಹೆಂಡತಿ ಬರುತ್ತಾಳಂತೆ ಎಂದು ಶಾಂತವ್ವನಿಗೆ ಅವಳ ಗೆಳತಿ ಹೇಳಿದಾಗ ಅದಕ್ಕವಳು ಅನ್ನುತ್ತಾಳೆ: "ನಾಯಕರು ಬರಲಿ ಅಂದರೆ ನಾವೂ ಬರಲಿ ಅಂತಲೇ ಅನ್ನಬೇಕು...."(ಪು. 64).

ಸುಬ್ಬಣ್ಣನಲ್ಲಿ ಬರುವ ಈ ಪ್ರಸಂಗವೂ ಉಲ್ಲೇಖನಾರ್ಹ. ಸುಬ್ಬಣ್ಣನು ತನ್ನ ಹೆಂಡತಿಗೆ ಹೊಡೆದ ಅಂತ ಹೇಳುವ ಮಾಸ್ತಿಯವರು ತಮ್ಮ ಕಣ್ಣಲ್ಲಿ ನೀರು ಬಂತು ಅಂತ ಬರೆಯುತ್ತಾರೆ. ಅಸಹಾಯಕಳಾದ ಹೆಂಡತಿಗೆ ಹೊಡೆದ ಎಂಬ ಮಾನವೀಯ ಸಂಕಟದಿಂದ ಹೇಳಿದ್ದಾಗಿದ್ದರೆ ಬೇರೆ ಮಾತು. ಆದರೆ ಹೆಣ್ಣಿಗೆ ಹೊಡೆಯುವುದು ನಮ್ಮ ಸಂಸ್ಕೃತಿಯಲ್ಲ ಎಂಬುದಾಗಿ ದುಃಖಿಸಿದಾಗ ಆದರ ಒತ್ತು ಸಂಸ್ಕೃತಿಯತ್ತ ಬೀಳುವುದರಿಂದ ಇದು ವ್ಯಕ್ತಿಗತವಾಗುತ್ತದೆಯೇ ಹೊರತು ಸಾಮಾಜಿಕವಾಗುವುದಿಲ್ಲ. ಯಾಕೆಂದರೆ ಸುಬ್ಬಣ್ಣ ಹೊಡೆದದ್ದು ತನ್ನ ಹೆಂಡತಿಯ ಮೇಲಿನ ಸಿಟ್ಟಿಗಲ್ಲ.

ಲೇಖಕರ ಪಾತ್ರಗಳಲ್ಲಿ ಕಂಡುಬರುವ ಮಾನವೀಯತೆಯ ಅಂಶಗಳನ್ನು ಗುರುತಿಸುವ ಪೂರ್ವದಲ್ಲಿ ಒಂದು ನಿದರ್ಶನವನ್ನಿಲ್ಲಿ ಕೊಡುವುದು ಸೂಕ್ತವೆಂದು ಭಾವಿಸಿದ್ದೇನೆ. 1979ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಸಣ್ಣ ಕಥೆಗಳ ಕಮ್ಮಟವನ್ನು ಸಂಘಟಿಸಿ ಒಂದು ದಿನ ಕಮ್ಮಟರಿಗಾಗಿ ಮಾಸ್ತಿಯವರೊಡನೆ ಸಂದರ್ಶನವನ್ನು ಏರ್ಪಡಿಸಿತ್ತು. ಸಂದರ್ಶನವಲ್ಲಿ ಸಾಕಷ್ಟು ಪ್ರಶ್ನೆಗಳನ್ನು ಅವರಿಗೆ ಕೇಳಲಾಯಿತು. ದಲಿತ, ಬಂಡಾಯ ಸಾಹಿತ್ಯದ ಬಗ್ಗೆಯೂ ಪ್ರಶ್ನೆ ಬಂದವು. ಇಂಥ ಪ್ರಶ್ನೆಗಳು ಅವರಿಗೆ ಅಪ್ರಿಯವಾದಂತೆನಿಸಿದವು. ಆಗ 'ಕಡೀತೀನಿ, ಹೊಡೀತೀನಿ ಅನ್ನೋದೆಲ್ಲ ಸಾಹಿತ್ಯವಾಗೋದಿಲ್ಲ. ಎಲ್ಲರಿಗೂ ಸುಖನೀಡುವಂಥ ನಮ್ಮ ಧರ್ಮವನ್ನು ಎತ್ತಿ ಹಿಡಿಯುವಂಥ ಸಾಹಿತ್ಯ ಸೃಷ್ಟಿಯಾಗಬೇಕು' ಎಂಬ ಅರ್ಥದಲ್ಲಿ ಮಾತನಾಡಿದರು. ಕಮ್ಮಟಿಗರಲ್ಲಿ ಕೆಲವರು ಈ ಮಾತನ್ನು ಒಪ್ಪಲಿಲ್ಲ. ಶೋಷಣೆ ಮಾಡಿದ ಜನರ ಬಗ್ಗೆ ಶೋಷಿತರು ಯಾಕೆ ಬರೆಯಬಾರದು ? ಅವರ ನೋವನ್ನು ಯಾಕೆ ಹೊರಹಾಕಿಕೊಳ್ಳಬಾರದು ? ಎಂಬುದು ಅವರ ವಾದವಾಗಿತ್ತು. ಈ ವಾದಕ್ಕೆ ನೇರ ಉತ್ತರ ನೀಡಲಾಗದ ಮಾಸ್ತಿಯವರು "ತಮ್ಮಾ, ನಿಮಗೆಲ್ಲ ನಾನು ಹಿರಿಯಣ್ಣ ಇದ್ದಂಗೆ, ನಾನು ಹೇಳ್ತೀನಿ ಕೇಳಿ. ನನ್ನ ಮಾತು ಕೇಳಿಯಪ್ಪ" ಎಂದು ಪ್ರತಿವಾದಿಸಿದರು. ಈ ಧೋರಣೆಯ ಅಂತರಾಳದಲ್ಲಿರುವ ಇಬ್ಬಂದಿತನವನ್ನು ನಾವು ಸೂಕ್ಷ್ಮವಾಗಿ ಗಮನಿಸಬೇಕು.

ಈ ಮಾತನ್ನು ಯಾಕೆ ಹೇಳಿದೆನೆಂದರೆ, ಕಾದಂಬರಿಕಾರರು ಪಾತ್ರಗಳ ಮೂಲಕ ಪ್ರಸಂಗಗಳನ್ನು ರೂಪಿಸುವಾಗ ಇರುವ ಮಾನವೀಯನಿಷ್ಠೆಗೂ ಅವರೇ ಆ ಸಂದರ್ಭಗಳಲ್ಲಿ ಮಾಸ್ತಿಯವರಾಗಿ ಹೇಳುವ ಮಾತುಗಳಿಗೂ ಇರುವ ಅಂತರವನ್ನು ಗುರುತಿಸಬೇಕಾಗಿದೆ. ಮಾಸ್ತಿಯವರ ಬರವಣಿಗೆಯ ನಂಬಿಕೆಯ ವೈರುಧ್ಯ ಇರುವುದೇ ಇಲ್ಲಿ ಅಂತ ನನಗನಿಸಿದೆ.

ಚಿಕ್ಕವೀರರಾಜೇಂದ್ರ ಮತ್ತು ಕುಂಟಬಸವ ಇಬ್ಬರೂ ದುಷ್ಟಜನ ನಿಜ. ಇವರ ದುಷ್ಟತನದಿಂದಾಗಿಯೇ ಕೊಡಗು ಸಾಮ್ರಾಜ್ಯ ಹಾಳಾಗುತ್ತದೆ. ಇದು ಕಾದಂಬರಿಯ ಆಶಯ. ಆದರೆ ಇವರ ದುಷ್ಟತನಕ್ಕೆ ಇವರೇ ನೇರವಾಗಿ ಎಷ್ಟು ಕಾರಣ ಎಂಬುದನ್ನು ನಾವು ಸಮಯಜ್ಞರಾಗಿ ಮರೆಯಬಾರದು. ಚಿಕ್ಕವೀರರಾಜೇಂದ್ರ ಹುಟ್ಟಿನಿಂದಲೇ ದುಷ್ಟನಲ್ಲ ಎಂಬ ಮಾತನ್ನು ಕಾದಂಬರಿಯ ಆರಂಭದಲ್ಲಿ ಲೇಖಕರೇ ಆಡಿದ್ದಾರೆ. ಅವನ ದುಷ್ಟತನಕ್ಕೆ ಮನೆಯ ವಾತಾವರಣ ಮತ್ತು ಕುಂಟ ಬಸವನ ಸ್ನೇಹ ಮುಖ್ಯ ಕಾರಣವೆಂಬುದು ಲೇಖಕರ ಮಾತು. ಅಂದರೆ ರಾಜನ ಹಿಂಸೆ ಮತ್ತು ಅತಿ

ಕಾಮುಕತೆ ಜೀವನ ಮೌಲ್ಯವನ್ನೇ ರಾಡಿ ಎಬ್ಬಿಸಿದರೂ ಅದಕ್ಕೆ ಕಾರಣ ಕುಂಟ ಬಸವನಾಗುತ್ತಾನೆ. ಕ್ಷಮಿಸಿ. ಕುಂಟಬಸವ ಮಾಡಿದ ತಪ್ಪುಗಳನ್ನೆಲ್ಲ ನಾನು ಸಮರ್ಥಿಸುತ್ತಿದ್ದೇನೆಂದಲ್ಲ. ಕೊಡಗು ಸಾಮ್ರಾಜ್ಯದ ಪತನಕ್ಕೆ ಮೂಲ ಹೇತುವಾಗಿ ಕುಂಟ ಬಸವನನ್ನೇ ಯಾಕೆ ಲೇಖಕರು ಹಿಡಿದು ತಂದರು ಮತ್ತು ಎಲ್ಲದಕ್ಕೂ ಅವನನ್ನೇ 'ಏಕತಾನವಾಗಿ ದೂರುತ್ತಾ ಹೋದರು ಎಂಬುದರ ಮರ್ಮವನ್ನು ಕಾದಂಬರಿಯ ಸಂವಿಧಾನದೊಂದಿಗೇ ಹುಡುಕುವುದು ನನ್ನ ಮಾತಿನ ಉದ್ದೇಶ.

ಅನೈತಿಕ ಸಂಬಂಧದಲ್ಲಿ ಹುಟ್ಟಿದ ಪಾಪದ ಕೂಸು ಬಸವ. ಈ ಕಾರಣಕ್ಕಾಗಿ ಹುಟ್ಟಿಸಿದ ಅಪ್ಪ ಮಗುವಿನ ಕಾಲು ತಿರುಚಿ ನಾಯಿಗಳ ಮಧ್ಯೆ ಬೆಳೆಸುತ್ತಾನೆ. ಅಂತಃಕರಣ, ಪ್ರೀತಿ, ವಾತ್ಸಲ್ಯದ ಗಂಧವೇ ಇಲ್ಲದ ಮೃಗೀಯ ವಾತಾವರಣದಲ್ಲಿ ಬೆಳೆದ ಇವನ ಸ್ನೇಹವನ್ನು ಅರಮನೆಯಲ್ಲಿ ರಾಜಕುಮಾರನಾಗಿ ಬೆಳೆದ ಚಿಕವೀರರಾಜ ಬಯಸುತ್ತಾನೆ. (ಇವರಿಬ್ಬರ ಸಂಬಂಧ ಕುದುರಿದ ಬಗ್ಗೆ ಕಾದಂಬರಿಯಲ್ಲಿ ಸ್ಪಷ್ಟ ಸನ್ನಿವೇಶ ವ್ಯಕ್ತವಾಗುವುದಿಲ್ಲ) ಮಾನವೀಯ ಅನುಕಂಪದ ಸವಿ ಅನುಭವಿಸದೇ ಬೆಳೆದ ತನಗೆ ಮಾನವ ಸ್ನೇಹ ನೀಡಿದ ಒಡೆಯನ ಸ್ಥಾನ ಕುಂಟ ಬಸವನ ಹೃದಯದಲ್ಲಿ ಚಿರಸ್ಥಾಯಿಯಾಗಿ ನಿಲ್ಲುತ್ತದೆ. ''ನಾನು ಒಂದು ಜೀವ ಅಂತ ಒಲಿದು ನೋಡಿರೋದು ಈ ಲೋಕದಾಗ ಅವರೊಬ್ಬರೇ. ಅಂಥ ಧಣಿ ಹತ್ತಿರ ನಾಯಿ ಆಗೋದು ಮಾನಕ್ಕೆ ಕಡಿಮೆ ಅಲ್ಲ..."(ಪುಟ. 130)

ಮೊದಲಿನಿಂದ ಕೊನೆಯವರೆಗೂ ನಾವು ಕಾದಂಬರಿಯನ್ನು ಸೂಕ್ಷ್ಮವಾಗಿ ಗಮನಿಸಿದರೆ, ಕುಂಟಬಸವ ಅಮಾನವೀಯವಾಗಿ ನಡೆದುಕೊಳ್ಳುವುದು ಕೇವಲ ಎರಡು ಪ್ರಸಂಗಗಳಲ್ಲಿ ಮಾತ್ರ. ಒಂದು—ಸೆರೆಮನೆಯಲ್ಲಿದ್ದ ದೇವಮ್ಮಾಜಿಯನ್ನು ತನ್ನ ಒಡೆಯನ ಕಟ್ಟಪ್ಪಣೆಗೆ ಕಟ್ಟುಬಿದ್ದು ತೊಡೆ ಮೇಲೆ ಕೂರಿಸಿಕೊಂಡ ಎಂಬುದು (ಪುಟ. 14), (ಇದೂ ಕೂಡ ಕುಂಟಬಸವನ ಇಚ್ಛೆಗೆ ವಿರುದ್ಧವಾಗಿ ನಡೆದುದೆಂದು ತಿಳಿಯುತ್ತದೆ) ಇನ್ನೊಂದು—ನಾಟಕದಲ್ಲಿ ತನ್ನ ವೇಷಹಾಕಿ ಅಣಕಿಸಿದ ಕುಂಟಲಕ್ಕನನ್ನು ನಾಯಿಯಿಂದ ಕಚ್ಚಿಸುವ ಪ್ರಸಂಗ (ಪು. 296) ಉಳಿದೆಲ್ಲ ಪ್ರಸಂಗಗಳಲ್ಲೂ ತನ್ನ ನಡೆ ನುಡಿಗಳ ಮೂಲಕ ಅರಸನಿಗೆ ನಿಷ್ಟ ಸೇವಕನಾಗಿ, ಸ್ನೇಹಿತನಾಗಿ, ಹಿತಾಚಿಂತಕನಾಗಿ, ರಕ್ಷಕನಾಗಿ ಉದ್ದಕ್ಕೂ ನಡೆದುಕೊಳ್ಳುವುದನ್ನು ಕಾಣುತ್ತೇವೆ. ಆದರೆ ಮಾಸ್ತಿಯವರು ವ್ಯಾಖ್ಯಾನಿಸುವಂಥ ಸನ್ನಿವೇಶಗಳಲ್ಲಿ ಮಾತ್ರ ದುಷ್ಟನೆಂಬ ಅಭಿಪ್ರಾಯ ಓದುಗರ ಮೇಲೆ ಮೂಡುತ್ತದೆ. (ಪು. 1, 45, 49, 52, 53) ಅವನು ಮಂತ್ರಿಯಾದ ಮೇಲೂ ಅದಕ್ಕಿಂತ ಮೊದಲು ಎಲ್ಲರು ಅವನನ್ನು ಕುಂಟ ಎನ್ನುತ್ತಾರೆ.

ಹೀಯಾಳಿಸುತ್ತಾನೆ. ಅದಕ್ಕಾಗಿ ಅವನಿಗೆ ನೋವಿದೆ. ಬೋಪ್ಪಣ್ಣ ಮಂತ್ರಿ ಒಮ್ಮೆ "ನಾಯಿಂದ. ನಿಮ್ಮಪ್ಪ ನಾಯಿಂದಿತ್ರಿ" ಎಂದು ಬೈದಾಗ ಅವನೆನ್ನುತ್ತಾನೆ: "ನನ್ನ ಕಾಲು ಕುಂಟು ನನ್ನ ಬುದ್ಧಿ ಕುಂಟಲ್ಲ" (ಪು. 49).

ಚಿಕ್ಕಣ್ಣಶೆಟ್ಟಿಯ ಸೊಸೆಯ ಮೇಲೆ ರಾಜ ಕಣ್ಣು ಹಾಯಿಸಿದಾಗ ಮೊದಲೇ ಆ ಹುಡುಗಿಯ ನೋಡಿದ್ದ ಕುಂಟಬಸವ ಹುಡುಗಿ ಅರಸನ ಕಣ್ಣಿಗೆ ಬೀಳದಿದ್ದರೆ ಚೆನ್ನ ಅಂದುಕೊಂಡಿರುತ್ತಾನೆ. (ಗಮನಿಸಿ: ಇದಕ್ಕಿಂತ ಮುನ್ನ ಲೇಖಕರು 'ಅರಸನಿಗೆ ಮಧ್ಯಮಾಂಸ ಸ್ತ್ರೀಯರನ್ನು ಒದಗಿಸಿ ಅವನ ಒಲವನ್ನು ಗಳಿಸಿದ ಕುಂಟ' (ಪು. 52) ಎಂದು ತಿಳಿಸುತ್ತಾರೆ). ಆದರೂ ಆಸೆ ಮಾಡುವುದು ಸರಿಯಿಲ್ಲವೆಂದು ರಾಜನಿಗೆ ವಿವೇಕ ಹೇಳುತ್ತಾನೆ. ಹೀಗೆ ಹೇಳಿದ್ದಕ್ಕಾಗಿ "ಒಳಿತು ಕೆಟ್ಟಿದ ನೀ ಏನು ಕಂಡೆಯೋ? ಹೇಳದ ಮಾತು ಮಾಡು ಹೆಚ್ಚಿಕೋಬೇಡ" (ಪು. 67) ಎಂದು ರಾಜನಿಂದ ಬೈಸಿಕೊಳ್ಳಬೇಕಾಗುತ್ತದೆ.

ಈ ವಿಷಯವನ್ನು ಚಿಕ್ಕಣ್ಣಶೆಟ್ಟಿ ಬೋಪ್ಪಣ್ಣ ಮಂತ್ರಿ ಹತ್ತಿರ ಬಂದು ಹೇಳಿದಾಗ ಲೇಖಕರು ಬೋಪ್ಪಣ್ಣನಿಂದ "ಅರಸರೇ ಮಾಡಿದ್ದು; ಕುಂಟ ಅವರು ಹಿಡಿದು ಸೌಟ." ಎನ್ನಿಸುತ್ತಾರೆ. ಅಂದರೆ ಆರಂಭದಲ್ಲಿ ಲೇಖಕರೇ ಅರಸನ ದುಶ್ಚಟಗಳಿಗೆ ಅವನ ಆಪ್ತ ಮಂತ್ರಿ ಕುಂಟಬಸವ ಕಾರಣ ಎಂದು ವ್ಯಾಖ್ಯಾನಿಸಿದ್ದ ಒತ್ತನ್ನು ಇಲ್ಲಿ ವಿಶೇಷವಾಗಿ ಗಮನಿಸಬೇಕು!

ಹಿಂದೆ, ಬಸವ ದೇವಮ್ಮಾಜಿಯನ್ನು ತನ್ನ ತೊಡೆ ಮೇಲೆ ಕೂರಿಸಿಕೊಂಡಿದ್ದನೆಂಬ ಪ್ರಸಂಗ ಬರುವುದಷ್ಟೆ. ಆದರೆ, ಅದೇ ದೇವಮ್ಮಾಜಿ ಸೆರೆಮನೆಯಿಂದ ಬಿಡುಗಡೆಗೊಂಡು ತನ್ನ ಅರಮನೆಗೆ ಹೊರಟಾಗ ಬಸವ ಬಂದು ವಿನೀತನಾಗಿ ಹೇಳುತ್ತಾನೆ: "ಅಮ್ಮಾಜಿಯವರು ನನ್ನ ಮೇಲೆ ಮನಸಿನಾಗೇ ಮುನಿಸು ಮಡಗಬಾರದು" (ಪು. 156). ಬಸವನ ಈ ಮಾತುಗಳ ಹಿಂದಿರುವ ಅಸಹಾಯಕತೆ, ಅಂತಃಕರಣ ಮತ್ತು ಪ್ರಾಯಶ್ಚಿತ್ತವನ್ನು ಗಮನಿಸಬೇಕು: ಇಂಥದ್ದೇ ಇನ್ನೊಂದು ಪ್ರಸಂಗ ಬರುತ್ತದೆ. ದೇವಮ್ಮಾಜಿ ಸೆರೆಯಲ್ಲಿದ್ದಾಗ ಅವಳ ಗಂಡನನ್ನು ಯಾರಿಗೂ ಕಾಣದಂತೆ, ಒಳಕ್ಕೆ ಬಿಟ್ಟು ಅವರಿಬ್ಬರ ಕೂಡಿಕೆಗೆ ಕಾರಣನಾದ ಉತ್ತಯ್ಯನ ಮೇಲೆ ಅರಸ ಅಸಾಧ್ಯ ಸಿಟ್ಟು ಮಾಡಿಕೊಂಡಿರುತ್ತಾನೆ. ಆಗ ಬಂದ ಉತ್ತಯ್ಯನಿಗೆ ಬಸವ ಎದುರಾಗಿ "ಒಡೆಯರು ತುಂಬಾ ಕೋಪವಾಗಿದ್ದಾರೆ. ಈಗ ಏನಾರ ಕೆಲಸ ಅದೆ ಅಂತ ಹೊರಟು ಹೋಗುವುದಾದರೆ ನೀವು ಹೋಗಿ ಬಿಡಿ. ನನ್ನ ಬೈತಾರೆ ನಾ ಕೇಳಿಕೋತೀನಿ" (ಪು. 158) ಎಂದು ಮಾನವೀಯತೆಯಿಂದ ನಡೆದುಕೊಳ್ಳುತ್ತಾನೆ.

ಹೀಗೆಯೇ, ಉತ್ತಯ್ಯಕಕ್ಕನಿಗೆ ನಿಶ್ಚಿಸಿದ್ದ ಹಡಿಕೊಡಿಸುವುದು ಪಾಣಿಪೂರ್ವ ನಾರಾಯಣನ ಹೆಂಡತಿಯನ್ನು ಬಿಡಿಸುವುದು, ಉತ್ತಯ್ಯ ಮತ್ತು ಉತ್ತಯ್ಯಕಕ್ಕನ ಶೌರ್ಯಕ್ಕೆ ಮೆಚ್ಚಿದ ಇಂಗ್ಲಿಷರು ಮರ್ಯಾದೆ ಮಾಡಲು ಬಂದಾಗ ಅದು ಕೂಡದೆಂದು ಹೇಳಿದ್ದ ರಾಜನನ್ನು ತಾನಾಗೇ ಒಪ್ಪಿಸುವುದು (ಪು 259). ಕಲೆಕ್ಟರನ ಕಡೆಯಿಂದ ಬಂದ ನಿಯೋಗಿಗಳನ್ನು ರಾಜ ನಿಂದಿಸಿ ಕಳಿಸಿದಾಗ ಬಸವ ಬಂದು ಅವರಿಗೆ ಸಮಾಧಾನ ಹೇಳುವುದು ಮುಂತಾದ ಸನ್ನಿವೇಶಗಳನ್ನು ಗಮನಿಸಬಹುದು. ರಾಜ ಮಗುವನ್ನು ಕೊಂದ ಸಂದರ್ಭದಲ್ಲಿಯೂ ಕೂಡ ಕುಂಟಬಸವ ಮಮ್ಮಲ ಮರುಗುತ್ತಾನೆ. ಹಾಗೆ ಆಗಬಾರದೆಂಬುದು ಅವನ ಅಂತರಂಗದ ಕೂಗಾಗಿತ್ತು. ಆದರೆ, ರಾಜ ಬಂದು ಮಗುವನ್ನು ಕೊಂದೆ ಎಂದು ತಿಳಿಸಿದಾಗ "ಅಯ್ಯೊ ಒಡೆಯರೆ" ಎಂದು ಬೆಚ್ಚಿ ಚೀರುತ್ತಾನೆ.

ನಾನು ಮೊದಲೇ ಹೇಳಿದಂತೆ, ಮೇಲ್ವರ್ಗದ ಹೆಣ್ಣು ಅತ್ಯಾಚಾರಕ್ಕೆ ಒಳಗಾಗಿ ಹುಟ್ಟಿದ ಫಲ ಈ ಕುಂಟಬಸವ. ಆ ಹೆಣ್ಣು ದೀಕ್ಷಿತನ ಸೋದರನ ಮಗಳಾದ ಪಾಪಾ ಅಥವಾ ಚಿಕ್ಕವೀರರಾಜನ ತಲೆಮಾರಿನ ಭಗವತಿ. ಆ ಬ್ರಾಹ್ಮಣನೊಬ್ಬ ಬ್ರಾಹ್ಮಣ ಹೆಣ್ಣನ್ನು ಶಾಸ್ತ್ರವಿರುದ್ಧವಾದ ಪ್ರತಿಲೋಮ ಕ್ರಮದಲ್ಲಿ ಕಾಮದ ಶೋಷಣೆಗೆ ಗುರಿ ಮಾಡಿದ್ದು ತಪ್ಪು.[2] ಈ ಪಾಪಕ್ಕಾಗಿ ಸಾಮ್ರಾಜ್ಯ ಪತನವಾಯಿತೆಂಬ ಎಚ್ಚರಿಕೆಯು ಸಂದೇಶ ಲೇಖಕರ ಇಂಗಿತವಾಗಿರಬೇಕು. ಈ ಪ್ರತಿಲೋಮ ಪಾಪಕೃತ್ಯದ ಶಿಶುವಾದ ಕುಂಟಬಸವನೇ ವಿನಾಶದ ಶಿಲ್ಪಿಯಾಗಬೇಕೆಂಬ ಮಾರ್ಮಿಕ ನಿರ್ಧಾರ ಇಲ್ಲಿರುವುದನ್ನು ಸೂಕ್ಷ್ಮವಾಗಿ ಗಮನಿಸಬಹುದು. ಭಗವತಿಯಂತೆಯೇ ಎಷ್ಟೋ ಹೆಣ್ಣು ಮಕ್ಕಳು ಕಾಮಕ್ಕೆ ತುತ್ತಾಗಿ ಹೋದ ಬಗ್ಗೆ ಕಾದಂಬರಿಯಲ್ಲಿ ವಿಫುಲ ಆಧಾರಗಳಿವೆ. ಆದರೆ ಇವರ್‍ಯಾರು ಭಗವತಿಯಂತೆ ತಮಗೆ ಹುಟ್ಟಿದ ಮಕ್ಕಳಿಗೆ ಪಟ್ಟ ಕಟ್ಟಿಸುವುದಕ್ಕಾಗಲೀ ಸೇಡು ತೀರಿಸಿಕೊಳ್ಳುವುದಕ್ಕಾಗಲೀ ಯಾಕೆ ಸಿಡಿದೇಳಲಿಲ್ಲ ?

ಸಾಮ್ರಾಜ್ಯ ಪತನದಂಥ ವಸ್ತುವನ್ನು ಆಯ್ಕೆ ಮಾಡಿಕೊಂಡ ಲೇಖಕರು ತಮ್ಮ ಪೂರ್ವ ನಂಬಿಕೆಗಳನ್ನು ಬಿಡಲಾರದೆ ಮನುಷ್ಯ–ಮನುಷ್ಯ ನಡುವಣ ಸಂಬಂಧವನ್ನು ಪೇಲವಗೊಳಿಸಿಬಿಟ್ಟಿದ್ದಾರೆ ಎನಿಸದೇ ಇರದು. ಮಗು ಸಾಯಿಸುವಂಥ ಪ್ರಸಂಗದಿಂದ ಈ ಅಂಶವನ್ನು ಗಮನಿಸಬಹುದು. ಚೆನ್ನಬಸವ–ದೇವಮ್ಮಾಜಿಯವರು ಕದ್ದು ಓಡಿ ಹೋಗುವಾಗ ತಮ್ಮ ಎಳೆ ಮಗು ಕೆಳಬಿದ್ದು ಚಿಕ್ಕವೀರರಾಜನ ಕೈ ಸೇರುತ್ತದೆ. ಅದು ತೀರಾ ಸಿನಿಮೀಯವಾಗಿ. ಹಸುಗೂಸು ಚಿಮ್ಮಿ ಹಾರುತ್ತಿದ್ದ ಕುದುರೆಯಿಂದ ಕೆಳಬಿದ್ದು ಚೀರದೆ, ಸಾಯದೆ ರಾಜನ ಕೈವಶವಾಗುತ್ತದೆಂಬುದೇ ಈ ಪ್ರಸಂಗದ ಕೃತಕತೆಯನ್ನು ತಿಳಿಸುತ್ತದೆ. ಇದಕ್ಕೆ ಕಾರಣವಿದೆ : ದೀಕ್ಷಿತ ವೀರರಾಜನಿಗೆ 'ಕಂಸಯೋಗ' ಇದೆ

ಯೆಂಥ ಭವಿಷ್ಯ ಸುಳ್ಳಾಗುತ್ತಾನೆ. (ಈ 'ಕಂಸಯೋಗ'ದ ಮರ್ಮ ಇಡೀ ಕಾದಂಬರಿಯ ತಿರುವಿಗೆ ಅರ್ಥತೆ ಸಾಮ್ರಾಜ್ಯದ ಪತನಕ್ಕೆ ಎಂಥ ಮದ್ದಾಗುತ್ತದೆ ಎಂಬುದನ್ನು ನಾವು ಬಹುಮುಖ್ಯವಾಗಿ ಗಮನಿಸಬೇಕು). ಲೇಖಕರು ಈ ಭವಿಷ್ಯ ವನ್ನು ಸುಳ್ಳಾಗಿಸಲಾಗದ ಈ ಬಗೆಯ ನಾಟಕೀಯ ಸನ್ನಿವೇಶವನ್ನು ತಂದು ತುರುಕಿ, ಒಂದು ರೀತಿಯಲ್ಲಿ ದೀಕ್ಷಿತನ ಜ್ಯೋತಿಶಾಸ್ತ್ರಕ್ಕೆ ಮಗುವನ್ನು ಬಲಿಕೊಡಿಸಿಬಿಡುತ್ತಾರೆ. ಈ ಮಗುವಿನ ಹತ್ಯೆ ಮಾನವೀಯ ಮೌಲ್ಯದ ಮೇಲೆ ನಡೆದ ಹತ್ಯೆಯಾಗಿರುತ್ತದೆ.[3]

ಚಿಕವೀರರಾಜನ ಹೆಂಡತಿ ಗೌರಮ್ಮಾಜಿ ಒಬ್ಬ ಆದರ್ಶಪತ್ನಿ. ತನ್ನ ಅರಸ ಎಂಥದೇ ನೀಚ ಕೃತ್ಯಗಳನ್ನು ಮಾಡಿದರೂ ಎದುರಾಡದ, ಅಡ್ಡಬರದ ಈಕೆ ಗಂಡ ನಿಂದ ಶೋಷಿಸಲ್ಪಟ್ಟ ಹೆಣ್ಣುಮಕ್ಕಳ ಕರೆಸಿ ರಾಜನಿಗೆ ಕೆಡುಕು ಬಯಸದೆ, ಒಳ್ಳೆಯದು ಹಾರೈಸಬೇಕೆಂದು ಕೇಳಿಕೊಳ್ಳುತ್ತಾಳೆ. ಅತಿ ಕಾಮುಕ ಮತ್ತು ಮತಿವಿಕಲನಾದ ರಾಜ ನಿಗೆ ಗುಣವಾಗಲೆಂದು ದೀಕ್ಷಿತನಿಂದ ಪೂಜೆ-ಪುರಸ್ಕಾರ ಹಾಕಿಸುವುದರಲ್ಲಿ ತೊಡಗಿ ಬಿಡುತ್ತಾಳೆ. ವಾಸ್ತವ ಸ್ಥಿತಿಯನ್ನರಿಯದ, ಮಾನವ ಸಹಜ ಹೆಣ್ತನಕ್ಕೆ ಸ್ಪಂದಿಸುವ ಕ್ರಿಯೆಯನ್ನು ಕಳೆದುಕೊಂಡಂತೆ ಭಾಸವಾಗುವ ಗೌರಮ್ಮಾಜಿ ಆದರ್ಶ ಅಥವಾ ಸನಾತನ ನಂಬಿಕೆಯ ಕೀಲುಗೊಂಬೆಯಾಗಿ ವರ್ತಿಸುವುದನ್ನು ಕಾಣಬಹುದು.[4] ಇವಳಂತೆಯೇ ಚೆನ್ನಬಸವನಾಯಕನ ಪತ್ನಿ ಶಾಂತವ್ವ ಕೂಡ. ಸುಂದರ ಕನಸು ಕಟ್ಟಬೇಕಾಗಿದ್ದ ಈ ತರುಣಿ ಮಾನವ ವಾಸನೆಯನ್ನೇ ಇಲ್ಲವಾಗಿಸಿಕೊಂಡು ಆದರ್ಶ ಸತಿಯಾಗಿ ತನ್ನ ಜೀವಕಳೆದುಕೊಳ್ಳುತ್ತಾಳೆ. ತಮ್ಮ ಬದುಕಿನ ಬಗ್ಗೆ ಯಾವುದೇ ಕಾಳಜಿ ತೋರದ ಇವರಲ್ಲಿ ಮಾನವೀಯ ತುಡಿತವನ್ನೇ ಕಾಣಲಾಗುವುದಿಲ್ಲ. ಎಲ್ಲ ಮಾನವಾತೀತ ತುಡಿತ ಇವರಲ್ಲಿ.

ಈ ರೀತಿ ಗೌರಮ್ಮಾಜಿ, ಶಾಂತವ್ವರು ಆದರ್ಶದ ನೆರಳಿನಲ್ಲಿ ನಿಷ್ಕ್ರಿಯವಾದರೆ, ಮಾನವೀಯ ಸ್ಪಂದನದ ಎಲ್ಲ ಸಾಧ್ಯತೆಯನ್ನೂ ಬಳಸಿಕೊಂಡು ಇಡೀ ಬಿದನೂರು ಸಂಸ್ಥಾನವನ್ನು ಉಳಿಸಬಹುದಾಗಿದ್ದ ಚೆನ್ನಬಸವನಾಯಕನ ತಾಯಿ ವೀರಮ್ಮಾಜಿ ತನ್ನ ದುಷ್ಟ, ಅವಿವೇಕತನದಿಂದಾಗಿ ಹಾಳಾಗುತ್ತಾಳೆ. ಸಂಸ್ಥಾನವನ್ನೂ ಹಾಳು ಮಾಡುತ್ತಾಳೆ; ಜೀವನ ಮೌಲ್ಯವನ್ನೇ ಕುಲಗೆಡಿಸಿಬಿಡುತ್ತಾಳೆ. ಸ್ವಭಾವತಃ ಹೇಡಿ ಯಾದ ನಂಬಯ್ಯನೆಂಬ ಮನೆವಾರ್ತೆಯವನ ಸಹವಾಸ ಮಾಡಿ, ಜೀವ ವಿರೋಧಿ ಗುಣವುಳ್ಳ ಈಕೆ ಸ್ವಂತ ಮಗನನ್ನು ಶಕ್ತಿಹೀನಗೊಳಿಸುತ್ತಾಳೆ. ಸೊಸೆಯನ್ನು ತುಚ್ಛ ವಾಗಿ ಕಾಣುತ್ತಾಳೆ. ಮಗ ಸೊಸೆ ಮೈಸೂರಿಗೆ ಹೋದ ಮೇಲೆ ಅನುಮಾನದ ಪುತ್ತ ಳಾದ ವೀರಮ್ಮಾಜಿ ನೇಮಯ್ಯನನ್ನು ಕರೆಸಿ ತೀರಾ ಅಸಂಬದ್ಧವಾಗಿ ಮಾತನಾಡಿ

ಬೈದು ಕಳಿಸುತ್ತಾಳೆ (ಪು. 258). ಹೀಗೆ ಬೈದು ಕಳಿಸಿದ್ದಕ್ಕಾಗಿ ಸಣ್ಣವ್ವ ಮತ್ತು ನಂಬಯ್ಯನೊಡನೆ ಒಂದು ಬಗೆಯ ವಿಚಿತ್ರ ಸಂತೋಷ ಅನುಭವಿಸುತ್ತಾ ಸಣ್ಣವ್ವನನ್ನು ತೀರಾ ಕ್ಷುಲ್ಲಕವಾಗಿ ಮುದ್ದಿಸುತ್ತಾಳೆ. ಅಷ್ಟೇ ಅಲ್ಲ ಯಾಕೋ ನಂಬಯ್ಯ ಸಣ್ಣವ್ವನನ್ನು ನೋಡಿದ ಎಂಬ ಅನುಮಾನಕ್ಕಾಗಿ ಸಣ್ಣವ್ವನಿಗೆ "ಈ ನಂಬಯ್ಯ ಅಂತಾ ಒಳ್ಳೇವನಲ್ಲ. ನೀನು ಅವನ ಹತ್ತಿರ ಅತಿ ಸಲಿಗೆ ಮಾಡಬೇಡ" (ಪು.263) ಎನ್ನುತ್ತಾಳೆ. ಇದಕ್ಕೆ ಸಣ್ಣವ್ವನ ಪ್ರತಿಕ್ರಿಯೆ ನೋಡಿ : "ನಿನ್ನ ನಂಬಯ್ಯ ನಿನಗಿರಲಿ ನಾನು ಅವನನ್ನು ಏನು ಮಾಡಿಕೊಂಡೇನು" (ಪು, 264) ಎಂದು ಕಟಕಿಯಾಡುತ್ತಾಳೆ.

ಚಿಕವೀರ ರಾಜೇಂದ್ರ ಕಾದಂಬರಿಯಲ್ಲಿ ಬರುವ ದೀಕ್ಷಿತ, ಲಕ್ಷ್ಮೀನಾರಾಯಣಯ್ಯರಂತೆ ಚೆನ್ನಬಸವನಾಯಕ ಕಾದಂಬರಿಯಲ್ಲಿ ಬರುವ ನೇಮಯ್ಯ ಕೂಡ ಒಬ್ಬ ಸಾತ್ವಿಕ. ನಿತ್ಯದ ಬದುಕಿಗೆ ನೆರವಾಗದ ಅಪಾರ ಅನುಕಂಪವುಳ್ಳ ಈ ಜನ ಮಾನವೀಯತೆಯಿಂದ ದೂರವಾಗಿಬಿಡುವುದನ್ನು ಗಮನಿಸಬಹುದು. ಒಮ್ಮೆ ರಾಣಿ ವೀರಮ್ಮಾಜಿಯೇ ಹೇಳುವಂತೆ ಶಿಕ್ಷಿಸಿ, ಎದುರಿಸುವುದು ಕಷ್ಟವಾಗಬಹುದಾದಂಥ ಪ್ರಭಾವಿ ಸ್ಥಾನದಲ್ಲಿದ್ದ ನೇಮಯ್ಯ ಆದರ್ಶದ ಅಪ್ಪಟತನ ಉಳಿಸಿಕೊಳ್ಳುವಲ್ಲಿ ವಾಸ್ತವ ಸ್ಥಿತಿಯನ್ನೇ ಎದುರಿಸಲೊಲ್ಲ, ಸಿನಿಕನಂತೆ ವರ್ತಿಸುತ್ತಾನೆ. ಪ್ರೊ॥ ಎಲ್. ಎಸ್. ಶೇಷಗಿರಿರಾವ್ ಹೇಳುವಂತೆ ನೇಮಯ್ಯನ ಪಾತ್ರವೂ ರಾಜ್ಯಕ್ಕೆ ಒದಗಿದ ದುರಂತಕ್ಕೆ ನೆರವಾಗಿದೆ. ಆತ ಆಳುವ ಧಣಿ ತಪ್ಪು ಮಾಡಿದರೆ ತಪ್ಪು ಎಂದೂ ತಿಳಿದೂ ಪ್ರತಿಭಟಿಸೋದಿಲ್ಲ. ಈ ಬಗೆಯ ವಿಧೇಯತೆ ರಾಜ್ಯಕ್ಕೆ ಕುತ್ತಾಗಬಹುದೆಂದೂ ಯೋಚಿಸುವುದಿಲ್ಲ. ಯೋಚಿಸಿದರೂ ಅದರಂತೆ ನಡೆಯಲೊಲ್ಲ (ಶ್ರೀನಿವಾಸ : ಅಭಿನಂದ ಗ್ರಂಥ).

ಒಂದು ರಾಜ್ಯದ ಏಳುಬೀಳಿನಂಥ ಗಂಭೀರ ಸಂದರ್ಭದಲ್ಲಿ, ಅದರಲ್ಲಿ ನೇರ ಪಾತ್ರ ವಹಿಸಬೇಕಾದ ವ್ಯಕ್ತಿ ಸನ್ಯಾಸಿಯಂಥ ಶುದ್ಧ ಮನಸ್ಸಿನವನು ಎಂದು ಆದರ್ಶೀಕರಿಸುವುದು ಆ ಪಾತ್ರವನ್ನು : ಅಂತೆಯೇ ಆ ಪಾತ್ರದಿಂದ ಹೊರಹೊಮ್ಮಬೇಕಾದ ಸಾಮಾಜಿಕ ಸಂಬಂಧದ ಜೀವನ ಮೌಲ್ಯವನ್ನು ಮಂಕುಗೊಳಿಸಿದಂತಾಗುತ್ತದೆ. ಮೈಸೂರಿನಿಂದ ಬಂದ ವೀರಣ್ಣ ಮತ್ತು ಸೂರಪ್ಪರನ್ನು ಜನ ಮೆಚ್ಚುವಂತೆ ಸತ್ಕರಿಸುವುದನ್ನು ಬಲ್ಲ ನೇಮಯ್ಯ ರಾಜಕೀಯ ಚಾಣಾಕ್ಷತನ ತೋರುವಲ್ಲಿ ಅತಿ ಸಂಯಮವಾದಿಯಾಗಿಬಿಡುತ್ತಾನೆ. ಆ ಸಂದರ್ಭದಲ್ಲಿ ಮಾಸ್ತಿಯವರು 'ನೇಮಯ್ಯ ಲೋಕದ ಎಲ್ಲ ಜೀವಿಗಳ ವಿಷಯದಲ್ಲಿಯೂ ಮನಸ್ಸನ್ನು ಚೆನ್ನ ಮಾಡಿಕೊಂಡಿದ್ದವನು ಶ್ರುತಿಯಾಗಿರುವ ವಾದ್ಯವನ್ನು ಜೇಷ್ಟಗೆಂದು ಮುಟ್ಟಿದ್ದರೂ ಸ್ವರ ಶ್ರುತಿಯಲ್ಲಿಯೇ ಹೊರಡುವಂತೆ ಸ್ವಭಾವ ಪರಿಶುದ್ಧವಾದ ಮೇಲೆ ಮನುಷ್ಯನ ಮಾತು ಎಂಥ ಹೊತ್ತಿನಲ್ಲಿಯೂ ಶುದ್ಧವಾಗಿಯೇ ಬರುತ್ತದೆ" (ಪು. 112) ಎಂದು ಬರೆಯುತ್ತಾರೆ. ಈ ಶುದ್ಧ ವ್ಯಕ್ತಿತ್ವ

ಸಾಮ್ರಾಜ್ಯವನ್ನು ಉಳಿಸುವುದು ಇರಲಿ, ಅಳಿಸುವುದಕ್ಕೆ ನೆರವಾಗುತ್ತದೆಂಬುದನ್ನು ಇಲ್ಲಿ ಗಮನಿಸಬೇಕು.

ಇದೇ ಬಗೆಯ ಸಂದರ್ಭವನ್ನು ಅವರ ಸುಬ್ಬಣ್ಣ ನೀಳ್ಗತೆಯಲ್ಲಿಯೂ ಕಾಣಬಹುದು. ಬ್ರಾಹ್ಮಣರಿಗೆ ಸಲ್ಲದ ನಟವರ ಸ್ವತ್ತಾಗಿದ್ದ ಸಂಗೀತದ ಬಗ್ಗೆ ಒಲವು ಬೆಳೆಸಿಕೊಂಡ ಸುಬ್ಬಣ್ಣ ಮನೆಯವರ ವಿರೋಧವನ್ನು ಕಟ್ಟಿಕೊಳ್ಳಬೇಕಾಗುತ್ತದೆ. ಇಂಥ ಪರಿಸ್ಥಿತಿಯಲ್ಲಿ ಅವನು ನೀಲಸಾನಿಯ ಆಶ್ರಯ ಪಡೆಯುತ್ತಾನೆ. ಮನೆಯಲ್ಲಿ ದೊರಕದ ಪ್ರೀತಿ, ವಿಶ್ವಾಸ, ಆದರಗಳನ್ನು ಆಕೆಯಲ್ಲಿ ಪಡೆಯುತ್ತಾನೆ. ಮಾನವೀಯ ಅಂತಃಕರಣದಿಂದ ಭಾವಣಿಸುತ್ತಿದ್ದ ನೀಲಸಾನಿ ಗೋಪಿಯಾಗಿಯೂ, ಸುಬ್ಬಣ್ಣ ಕೃಷ್ಣನಾಗಿಯೂ ಬಿಡುತ್ತಾರೆ. ಮಾಸ್ತಿಯವರು ಪೌರಾಣಿಕಾರ್ಥವನ್ನು ಕೊಟ್ಟು ಅವರ ಲೌಕಿಕ ಸಂಬಂಧವನ್ನೇ ಕಳಚಿ ಬಿಡುತ್ತಾರೆ.

ಹೀಗೆಯೇ ಸ್ವಭಾವತಃ ಸಾಹಸಿಯಾದ ಚೆನ್ನಬಸವನಾಯಕ ಬೂದಿ ಬಸವನಾಗಿ ಅಲೆಯುತ್ತಾನೆ. ಯಾವ ಪುರುಷಾರ್ಥಕ್ಕಾಗಿ ಹೀಗೆ ಅಲೆದ ಎಂಬುದು ಸಂಗತವಾಗುವುದಿಲ್ಲ. ಬೂದಿಬಸವನಾಗಿ ಜನಜೀವನವನ್ನು ಅರ್ಥ ಮಾಡಿಕೊಂಡನೆ ? ಜೀವನ ಮೌಲ್ಯವನ್ನು ತೆಗೆದು ತೋರಿಸಿದನೆ ? ಹೋಗಲಿ, ಸಂಸ್ಥಾನವನ್ನು ಉಳಿಸಿಕೊಂಡನೆ ? ಮೈಸೂರಿಗೆ ಹೋದಾಗ ಅವನು ತೋರಿಸಿದ ಕೆಲವು ಸಾಹಸದ ಕೆಲಸ ಮತ್ತು ಮಾತುಕತೆಯಿಂದ ವ್ಯಕ್ತವಾಗುವ ವ್ಯಕ್ತಿತ್ವ ಬಿಟ್ಟರೆ ಉಳಿದಂತೆ, ಅವನು ವೇಶ ಮರೆಸಿಕೊಂಡು ಓಡಾಡಿದಂತೆಯೇ ಕಾದಂಬರಿಯಲ್ಲಿಯೂ ಮಸಕುಮಸಕಾಗಿ ಕಾಣುತ್ತಾನೆ. ಸಂಸ್ಥಾನದ ರಾಜನಾಗಬೇಕಾದ ಈತ ತನ್ನ ತಾಯಿಯ ಎದುರಿಸಿಯೂ ರಾಜನಾಗಲಾರ ; ಜನ ಬೆಂಬಲವಿದ್ದರೂ ಅದರ ಉಪಯೋಗ ಪಡೆಯಲಾರ. ಇವನ ಈ ಬಗೆಯ ಬೇಜವಾಬ್ದಾರಿತನಕ್ಕೆ ಬಿದನೂರು ಸಂಸ್ಥಾನ ತನ್ನ ಒಡೆತನ ಕಳೆದುಕೊಳ್ಳಬೇಕಾಗುತ್ತದೆ.

ಚೆನ್ನಬಸವನಾಯಕ ಕಾದಂಬರಿಯಲ್ಲಿ ಬರುವ ಮಲ್ಲಿಗೆ ಜೀವನವನ್ನು ಅತ್ಯಂತ ಆಳವಾಗಿ ಪ್ರೀತಿಸುವಂಥ ಒಂದು ಜೀವಂತ ಪಾತ್ರ. ಅವಳ ಪ್ರೇಮಿ ಸಗುನ ಎಂಬುವನು. ಇವನನ್ನಲ್ಲದೆ ಬೇರೆ ಯಾವ ಗಂಡನ್ನೂ ಒಲ್ಲಳು. ಅದಕ್ಕಾಗಿ ತನ್ನ ಹೆಗ್ಗಡತಿಯೇ ಖುದ್ದು ಹೇಳುವ ಜವರನನ್ನು ನಿರಾಕರಿಸುತ್ತಾಳೆ. ಈ ನಿರಾಕರಣೆ ತನ ಒಡತಿಯ ಬೇಸರಕ್ಕೆ ಕಾರಣವಾಗಬಾರದೆಂಬ ಕೊರಗೂ ಅವಳಲ್ಲಿವೆ. ಆದ್ದರಿಂದ ಅವಳು ಮನುಷ್ಯ ಸಾಧ್ಯವಾದ ಎಲ್ಲ ಆಲೋಚನೆಗಳನ್ನೂ ಮಾಡುತ್ತಾಳೆ. ಒಲಿದವನ ಬಿಡಲಾರದೆ, ಆದವರ ದೂರಸರಿಸಲಾರದೆ ಜೀವನವನ್ನು ಮೆಟ್ಟಿ ಹೋರಾಡುವ ಈ ಪ್ರಯತ್ನಶೀಲೆಯ ಕೆಚ್ಚನ್ನು ಗಮನಿಸಬೇಕು. ಅವಳು ಶಿವಪ್ಪನಿಗೆ ಹೆಗ್ಗಡತಿಯವರೇ

ನಮಗೆ ಮದುವೆ ಮಾಡಿ ಆಶೀರ್ವಾದ ಮಾಡಬೇಕು. ನಾವೇನು ಕಾಡಿನಲ್ಲಿ ಮದುವೆ ಆಗಬೇಕಾ? ಎಂಬುದಾಗಿ ಕೇಳುತ್ತಾಳೆ (ಪು.158). ಬದುಕಿನ ತುಂಬ ಭರವಸೆ ತುಂಬಿಕೊಂಡ ಈ ಮಲ್ಲಿಗೆ-ಸುಗನರು ಹೋದಬಂದ ಕಡೆ ಮಿಂಚಿನಂತೆ ಸುಳಿದಾಡುತ್ತಾರೆ. ನಡೆನುಡಿಗಳಲ್ಲಿ ಹರ್ಷ ತುಂಬಿಕೊಳ್ಳುತ್ತಾರೆ. ಮನುಷ್ಯ ಬದುಕಿನ ಎಲ್ಲ ಲವಲವಿಕೆಯಿಂದ ಕಂಗೊಳಿಸುತ್ತಾರೆ. ಹೀಗೆ ಮನುಷ್ಯ ಸಾಧ್ಯತೆಯಿಂದ ಹುಟ್ಟಿ ಬಂದ ಆತ್ಮೀಯ ಸಂಬಂಧ ನಿಜವಾದ ಒಂದು ಆದರ್ಶವಾಗುತ್ತದೆ; ಮೌಲ್ಯವೆನಿಸುತ್ತದೆ. ಆದರೆ ಈ ಬಗೆಯ ಧ್ವನಿ ಕಾದಂಬರಿಯ ಕೇಂದ್ರ ಬಿಂದುವಿನೊಡನೆ ಒಂದಾಗುವುದಿಲ್ಲ. ಪ್ರತ್ಯೇಕವಾದ ತುಣುಕಾಗಿ ಬಿಡುತ್ತದೆ.

ಹೀಗೆಯೇ ಹೆಗ್ಗಡತಿಯೂ ಕೂಡ ಜೀವನದಲ್ಲಿ ಆಪ್ತತೆ ಹುಟ್ಟಿಸುವ ಹೆಣ್ಣು. ಹಿರಿಯ ಸೊಸೆಯಾಗಿ ವ್ಯಾವಹಾರಿಕತೆ ಬಲ್ಲವಳು. ವಾಸ್ತವ ಸಂಗತಿಯನ್ನು ಅರಿತು ಪ್ರತಿಕ್ರಿಯಿಸುವವಳು. ಚೆನ್ನಬಸವನಾಯಕನಿಗೆ ಪಟ್ಟಕಟ್ಟದೆ ಸಂಸ್ಥಾನಕ್ಕೆ ಆಗಿರುವ ಅನಾಹುತವನ್ನು ನೆನೆದು ನೇರವಾಗಿ ರಾಣಿಗೆ ಪತ್ರ ಬರೆದು ತಿಳಿಸುತ್ತಾಳೆ. ಜನರ ನಿರೀಕ್ಷೆಗೆ ಪ್ರತಿನಿಧಿಯಾಗಿ ಸ್ಪಂದಿಸುತ್ತಾಳೆ. ಆದರ್ಶದ ಗೊಂಬೆಗಳಂತೆ ಕಾಣುವ ಗೌರಮ್ಮಜಿ–ಶಾಂತವ್ವರಿಗಿಂತ ಈ ಹೆಗ್ಗಡತಿ ಮಲ್ಲಿಗೆಯರು ತಮ್ಮ ನೇರ ಕ್ರಿಯೆಗಳಿಂದ ಅಭಿಮಾನಿಗಳಾಗುತ್ತಾರೆ. ಹೀಗೆಯೇ ಚಿಕವೀರರಾಜೇಂದ್ರ ಮಂತ್ರಿ ಬೋಪಣ್ಣ ಚೆನ್ನಬಸವನಾಯಕನ ರಾಮಾಶಾಸ್ತ್ರಿಯರೂ ಕೂಡ ಇರುವ ಸ್ಥಿತಿಯನ್ನು ಯಥಾವತ್ತಾಗಿ ನೋಡಿ ಜನರೊಡನೆ ಬೆರೆತು ಅವರ ಭಾವನೆಗಳಿಗೆ ಸ್ಪಂದಿಸುವ ಸತ್ಯ-ನಿಷ್ಠರಾಗಿ ಪ್ರತಿಕ್ರಿಯಿಸುವ ವ್ಯಕ್ತಿತ್ವವುಳ್ಳವರು. ರಾಮಾಶಾಸ್ತ್ರಿ ಸೋಮಯ್ಯನಿಗೆ ಹೇಳುತ್ತಾನೆ: "ನಾಯಕರಿಗೆ ಪಾಪ ಎನ್ನುವುದನ್ನು ಮರೆತು ಅವರಿಗೆ ಪಟ್ಟಕಟ್ಟುವ ವಿಷಯವನ್ನು ಮುಂದಿರಿಸಿ, ಸ್ವಂತಕ್ಕೆ ಎಂತ ಆತುರ ಪಡೋದು ತಪ್ಪು". ಹಾಗೆಯೇ ಸ್ವಂತ ಅಂತ ಒಳ್ಳೆಯದನ್ನು ಮಾಡದೆ ಸಂಕೋಚ ಪಡೋದು ತಪ್ಪು. ಇಂಥ ಮಾತುಗಳಲ್ಲಿ ಕಾದಂಬರಿಕಾರರ ವಸ್ತುನಿಷ್ಠತೆಯನ್ನು ಕಾಣಬಹುದು. ಚಿಕ್ಕವೀರರಾಜೇಂದ್ರದಲ್ಲಿಯ ಬೋಮ, ಭಗವತಿ, ಉತ್ತಯ, ಚೆನ್ನಬಸವನಾಯಕನಲ್ಲಿನ ಲಿಂಗಯ್ಯ, ಉಜನಿ, ಸಗುನ, ಕೆಂಚೆವ್ವೆ ಇವರಲ್ಲೆಲ್ಲ ತಮ್ಮ ತಮ್ಮ ಸೀಮಿತ ಅವಕಾಶದಲ್ಲೇ ಜೀವನ ನಂಬಿಕೆಗಳನ್ನು ಆಪ್ತತೆಯನ್ನು ಪ್ರಕಟಪಡಿಸುತ್ತಾರೆ.

ಚೆನ್ನಬಸವನಾಯಕ ತನ್ನ ನೆಚ್ಚಿನ ಮಡದಿಯನ್ನು ಕಳೆದುಕೊಂಡ ಸಂದರ್ಭ. ಶಾಂತವ್ವನನ್ನು ಮಣ್ಣು ಮಾಡಿದ ಮೇಲೆ ಒಬ್ಬನೇ ಕೂತು ಸಮಾಧಿಯ ಮೇಲೆ ಕಣ್ಣಾಡಿಸುತ್ತಾ ಅಂದುಕೊಳ್ಳುತ್ತಾನೆ: "ಎಂಥ ಪ್ರೇಮದ ರಾಶಿಯನ್ನು ಅದು ಮುಚ್ಚಿ (ಮಣ್ಣು) ಮುಗಿಸಿತು"(ಪು. 402). ಈ ಮಾತಿನಲ್ಲಿ ಇಡೀ ಮಾನವ ಪ್ರೇಮವನ್ನೇ ಬಗಿದು ಆಡಿದ ನೋವಿದೆ. ಆದರೆ ಲೇಖಕರು ಮುಂದುವರಿಸಿ ನಾಯಕನ ಮಾನಸಿಕ ಚಿಂತನೆ

ಯನ್ನು 'ಮನುಷ್ಯನ ಹಣೆಯ ಬರಹ' ಎಂಬುದರಲ್ಲಿ (ಪು. 402) ಮುಕ್ತಾಯಿಸಿಬಿಡುತ್ತಾರೆ. ಮನುಷ್ಯ ಮನುಷ್ಯ ಸಂಬಂಧವನ್ನು ಮೌಲ್ಯವಾಗಿಸಬಹುದಾಗಿದ್ದ ಈ ಕ್ರಿಯೆ ಅಂತರ್ಮುಖಿಗೊಂಡು ದುರ್ಬಲವಾಗಿ ಬಿಡುತ್ತದೆ.

ಒಟ್ಟಿನಲ್ಲಿ ಮೇಲಿನ ಅಂಶಗಳನ್ನು ಜತೆಜತೆಗಿಟ್ಟು ನೋಡಿದರೂ ಮಾಸ್ತಿಯವರ ಕಾದಂಬರಿಗಳಲ್ಲಿ ಮೇಲ್ಗೈ ಸಾಧಿಸುವುದು ಒಂದು : ಅವರ ಸನಾತನ ಪ ಶೀಲವಾದ ನಂಬಿಕೆಗಳು. ಎರಡು : ಇದರಿಂದಾಗಿ ಮೇಲ್ವರ್ಗದ ವ್ಯಕ್ತಿಗಳಿಗಷ್ಟೇ ಸೀಮಿತವಾಗಿ ಬಿಡುವ ಆದರ್ಶೀಕರಣ (ಈ ಮಾತನ್ನು ಅವರ ಕಾದಂಬರಿಗಳಿಗೆ ಮಾತ್ರ ಅನ್ವಯಿಸಿ ಹೇಳುತ್ತಿದ್ದೇನೆ). ಗೌರಮ್ಮಾಜಿ, ಶಾಂತವ್ವ, ಸೋಮಯ್ಯ, ದೀಕ್ಷಿತ ಮುಂತಾದ ಮೇಲ್ ಸ್ತರದ ಜನರಲ್ಲಿ ಅವರು ತೋರುವ ಒಂದು ಬಗೆ ಆದರಾಭಿಮಾನ ಸಗುನ, ಜೋಮು ಉತ್ತಯ್ಯ, ವೆಂಕಟರಮಣ, ನೀಲಸಾನಿ ಮುಂತಾದ ಲವಲವಿಕೆಯುಳ್ಳ ಪಾತ್ರಗಳಲ್ಲಿ, ಕಾಣುವುದಿಲ್ಲ. "ಸೂಳೆಯರಿಗೆ ಪಾಠ ಹೇಳುವುದಾದರೆ ಅವರು ಹಣ ಕೊಡುವುದಕ್ಕೆ ಸಿದ್ಧವಾಗಿದ್ದರು ಆದರೆ ಅದು ನೀಚಾನ್ನ" ಎಂದು ಅಂಥವಳ ಮನೆಯಲ್ಲಿಯೇ ಆಶ್ರಯ ಪಡೆದಿದ್ದ ಸುಬ್ಬಣ್ಣ ಅಂದುಕೊಳ್ಳುತ್ತಾನೆ! (ಪು, 27). ದರ್ಪ ದೌಲತ್ತಿನ ಸ್ವಭಾವದ ಸುಬೇದಾರರರಿಗೆ ಸುಬ್ಬಣ್ಣ ಪರಿಚಯವಾದಾಗ ಅವರ ಬಗ್ಗೆ ಲೇಖಕರು ಬರೆಯುತ್ತಾರೆ: "ಎಷ್ಟಾದರೂ ದೊಡ್ಡತರದ ಮನುಷ್ಯರು ದೊಡ್ಡವರ ಕಂಡಾಗ ಗುರುತಿಸುವವರು. ಮರ್ಯಾದೆ ಮಾಡುವವರು" (ಪು. 72). ಈ ಮಾತಿನಲ್ಲೂ ಕೂಡ ಬಡಜನರಿಗೆ ಸ್ಪಂದಿಸದ ಧ್ವನಿಯೇ ಇದೆ. ಅಂದರೆ ನೀಚಾನ್ನ ಮಾಡುವವರು ಮಾಸ್ತಿಯವರೆ. ದೊಡ್ಡವರ ಮಾಡುವವರೂ ಮಾಸ್ತಿಯವರೆ. ಮೈಸೂರಿನ ರಾಜಮಾತೆ ಶಾಂತವ್ವನನ್ನು ಮುದ್ದಿಸುವ ಸಂದರ್ಭದಲ್ಲಿ ಮಾಸ್ತಿಯವರು ಹೀಗೆ ಹೇಳುತ್ತಾರೆ: "ಅರಸು ಮಕ್ಕಳ ಹಿರಿಯಾಕೆ ತನ್ನ ಕುಲದವಳಲ್ಲದ ಈ ತರುಣಿಯನ್ನು ಹೀಗೆ ಮುದ್ದಿಸುವುದರಲ್ಲಿ ತನ್ನ ಸಂಪ್ರದಾಯದ ಬಿಗುಮಾನವನ್ನು ಮರೆತಳೆನ್ನಬೇಕು" (ಪು. 228). ಈ ಮಾತನ್ನು ಆಡುವ ಅನಿವಾರ್ಯತೆ ಸಹಜ ಮಾನವೀಯ ಅಂತಃಕರಣದಿಂದ ತುಂಬಿದ್ದ ಆ ಸನ್ನಿವೇಶಕ್ಕೆ ಅಗತ್ಯವಾಗಿರಲಿಲ್ಲ. ಅಲ್ಲದೆ ಈ ರಾಜಮಾತೆ ಶಾಂತವ್ವನನ್ನು ಮುದ್ದಿಸುವ ರೀತಿಯ ಅಂತಸ್ತನ್ನು ಅಂತೆಯೇ ಆ ವೀರಮ್ಮಾಜಿ ಸಣ್ಣವ್ವನ "ಎಲ್ಲಿ ನನ್ನ ಚಿನ್ನ ನಿನ್ನ ಮುಖ ಇತ್ತ ತಾ" (ಪು. 263) ಎಂದು ಮುದ್ದಿಸುವ ರೀತಿಯ ಅಂತಸ್ತನ್ನು ಗಮನಿಸಿ. ಮಾಸ್ತಿಯವರ ಮಾನದಂಡದಲ್ಲಿ ಈ ಜನ ಇವರೇ ; ಆ ಜನ ಅವರೇ. ಚಿಕವೀರರಾಜ ಕುಂಟಬಸವನನ್ನು ಯಾವಾಗಲೂ 'ಮುಂಡೇದೆ' ಎಂದು ಕರೆಯುತ್ತಾನೆ. ಬ್ರಾಹ್ಮಣರು ಕೆಳವರ್ಗದವರನ್ನು ತಮ್ಮ ಮೆಚ್ಚಿಗೆ ಅಥವಾ ಸಿಟ್ಟನ್ನು ವ್ಯಕ್ತಪಡಿಸುವ [illegible] ಸಂದರ್ಭದಲ್ಲಿಯೂ 'ಮುಂಡೇದೆ' 'ಶೂದ್ರಮುಂಡೇದ' ಎಂದು ಸಂಭೋಧಿಸಿಯೇ ಕರೆಯುತ್ತಾರೆ.

ಈ ಬಗೆಯ ವರ್ಗಪ್ರಜ್ಞೆ ಕಾದಂಬರಿಯಲ್ಲಿ ಇದೆ. ಶ್ರೇಣಿಕೃತ ಸಮಾಜ ವ್ಯವಸ್ಥೆಯಲ್ಲಿ ಆಸ್ಥೆ ಇರುವ ಮಾಸ್ತಿಯವರು, ಆ ತಮ್ಮ ಒಲವನ್ನು ಬಹಳ ಗುಪ್ತವಾಗಿ ಪಾತ್ರಗಳ ಕುರಿತ ತದ್ವತ್ ವಿವರಣೆಯಲ್ಲಿ ತಿಳಿಸುತ್ತಾ ಹೋಗುತ್ತಾರೆಂಬುದಕ್ಕೆ ಮೇಲಿನ ಉದಾಹರಣೆಗಳನ್ನು ನೀಡಿದ್ದೇನೆ.

ಇಷ್ಟೆಲ್ಲ ಚರ್ಚೆಯ ನಂತರ ಕೊನೆಯ ಮಾತಿಗೆ ಬರುತ್ತೇನೆ. ಮಾಸ್ತಿಯವರು ತಮ್ಮ ಕಾದಂಬರಿಗಳಿಗೆ ಸಾಮ್ರಾಜ್ಯಗಳು ಪತನಗೊಳ್ಳುವಂಥ ವಸ್ತುವನ್ನು ಆಯ್ಕೆಮಾಡಿಕೊಂಡಿದ್ದಾರೆ. ಆದ್ದರಿಂದಲೇ ಆ ರಾಜ್ಯಗಳ ವಿನಾಶಕ್ಕೆ ಅವಶ್ಯವಾದ ವಿನಾಶಕಾರರನು ಸೃಷ್ಟಿಸಿಕೊಳ್ಳಬೇಕಾಯ್ತು ಎಂಬುದು ದಿಟ. ಆದರೆ ಹೇಗೆ ಸೃಷ್ಟಿಸಿಕೊಂಡ. ಮತ್ತು ಈ ಕಾರಣದಿಂದ ಮಾನವೀಯ ಅಂತಃಕರಣ ಒಂದು ಆದರ್ಶೀಕರಣಗೊಂಡಿತು. ಇನ್ನೊಂದು—ಅಪಮೌಲ್ಯಹೊಂದಿತು ಎಂಬ ಸಂಗತಿಗಳನ್ನು ನಾವು ಗಮನಿಸಬೇಕಾಗಿದೆ. ಅಂದರೆ ಮೂಲತಃ ಮಾಸ್ತಿಯವರಿಗೆ ಮಾನವೀಯ ಅನುಕಂಪವೇ ಇಲ್ಲವೆಂದು ನನ್ನ ವಾದವಲ್ಲ. ಸನಾತನ ಧರ್ಮದಲ್ಲಿ, ಮಾನವೀಯ ಸ್ನೇಹದಲ್ಲಿ ಅಷ್ಟೆಲ್ಲ ಕಾಳಜಿ ತೋರುವ ಅವರು ತಮ್ಮ ಕಾದಂಬರಿ ಚೌಕಟ್ಟಿನೊಳಗೆ ಮೇಲರಿವು ಹೇಗೆ ಕೆಲಸ ಮಾಡುತ್ತದೆ ಮತ್ತು ಅದು ಪ್ರಜಾ ಸಮುದಾಯದೊಳಗೆ ಹೊಕ್ಕಾಡಬೇಕಾದ ಸಾರ್ವತ್ರಿಕವಾದ ಮಾನವೀಯ ಅನುಕಂಪವನ್ನು ಹೇಗೆ ಮಸಕುಗೊಳಿಸಿ ಬಿಡುತ್ತದೆ ಎಂಬುದನ್ನು ನಾವು ಮರೆಯಲಾಗುವುದಿಲ್ಲ.

ಒಟ್ಟಿನಲ್ಲಿ ಈ ಚರ್ಚೆ ಸ್ವಯಂಪೂರ್ಣ ಸಿದ್ಧಾಂತವೆಂದು ನಾನು ತಿಳಿದಿಲ್ಲ. ವೈಯಕ್ತಿಕವಾಗಿ ಮಾಸ್ತಿಯವರ ಮೇಲೆ ನನಗೆ ವಿಶ್ವಾಸ–ಗೌರವಗಳಿದ್ದರೂ ಕೃತಿಗಳನ್ನು ಓದಿದ ನಂತರ ಮೂಡಿದ ಅಭಿಪ್ರಾಯಗಳನ್ನು ನಿಮ್ಮ ಮುಂದಿರಿಸಿದ್ದೇನೆ.

**ಅಡಿಟಿಪ್ಪಣಿ :**

1 ಈ ನೇರದಲ್ಲಿಯೇ ಕುಂಟಬಸವನ ಬಗ್ಗೆ ಕೆಲವು ವಿಮರ್ಶಕರು ವ್ಯಕ್ತಪಡಿಸಿರುವ ಅಭಿಪ್ರಾಯಗಳು ಹೀಗಿವೆ :

ಅ) ಕೀಳು ಕೆಲಸದಲ್ಲಿದ್ದು ಅರಸನ ಸ್ನೇಹವನ್ನು ಸಂಪಾದಿಸಿ ಮಂತ್ರಿಯಾದ ಕುಂಟಬಸವ ವಿಸ್ನುಪವನು ರಾಜನ ದೌರ್ಭಾಗ್ಯದ ಶಿಲ್ಪಿಯಾದ.

ಅ) ಕುಂಟಬಸವ ಅರಸನನ್ನು ವಿನಾಶದತ್ತ ಕರೆದೊಯ್ಯುತ್ತಾನೆ.

–ಪ್ರೊ : ಎಲ್. ಎಸ್. ಶೇಷಗಿರಿರಾವ್. ಶ್ರೀನಿವಾಸ

ಇ) ಅವನು ಕೆಡುಕನ ದಾರಿ ತುಳಿದಷ್ಟು ಇನ್ನೂ ತುಳಿ ಇನ್ನೂ ತುಳಿ ಎಂದು ಹೇಳಿಕೊಂಡು ಬಂದಿದ್ದ ಕುಂಟಬಸವ.

ಈ) ನಿಜವಾಗಿ ನೋಡಿದರೆ ಅವನು ಸತ್ತುದ್ದಕ್ಕೆ ಎಲ್ಲರೂ ಹಾಲು ಕುಡಿಯ ಬೇಕು, ಅಂತಹ ನೀಚ; ದುರಾತ್ಮ ಅವನು –ಶ್ರೀ ಸಿದ್ದಯ್ಯ ಪುರಾಣಿಕ–ಚಿಕವೀರ ರಾಜೇಂದ್ರ ಒಂದು ಚಿಂತನ.

2 ಸಂಕ್ರಮಣ : ಅಗಸ್ಟ್-ಸೆಪ್ಟೆಂಬರ್ 84 : ಮನಜ ಅವರ ಲೇಖನವನ್ನು ಗಮನಿಸಬಹುದು.

3 ಕೆಲವು ವಿಮರ್ಶಕರು 'ಶಿಶು ಹತ್ಯೆಯನ್ನು' 'ಅದೃಷ್ಟ' ಎಂದಿರುವುದು 'ಆಕಸ್ಮಿಕ' ಎಂದಿರುವುದು–ಈ ಘಟನೆಯನ್ನು ಗಂಭೀರವಾಗಿ ಪರಿಗಣಿಸಲಾಗುವು ದಿಲ್ಲ. —ಶ್ರೀ ಎಲ್. ಎಸ್. ಶೇಷಗಿರಿರಾವ್, ಶ್ರೀ ಕೆ. ನರಸಿಂಹಸ್ವಾಮಿ, (ಚಿಕವೀರರಾಜೇಂದ್ರ ಒಂದು ಚಿಂತನೆ. ಕ. ಸಾ. ಅಕಾಡೆಮಿ ಪ್ರಕಟಣೆ-1985)

4 ಶ್ರೀ ಸಿದ್ದಯ್ಯ ಪುರಾಣಿಕರು ಆದರ್ಶ ಸಾಧ್ವೀಶಿರೋಮಣಿ ಎಂದು ಬಣ್ಣಿಸು ತ್ತಾರೆ! (ಚಿಕವೀರರಾಜೇಂದ್ರ ಒಂದು ಚಿಂತನೆ: ಕ. ಸಾ. ಅಕಾಡೆಮಿ ಪ್ರಕಟಣೆ, 1985).

## ನೆರವು ಗ್ರಂಥಗಳು :


1. ಶ್ರೀನಿವಾಸ : (ಅಭಿನಂದನ ಗ್ರಂಥ)
   ಸಂಪಾದಕರು : ಮಾವಿನಕೆರೆ ರಂಗನಾಥನ್
2. ಚಿಕವೀರರಾಜೇಂದ್ರ : ಒಂದು ಚಿಂತನೆ
3. ಸ್ವಸ್ತಿ : (ತ. ಸು. ಶಾ. ಅಭಿನಂದನ ಗ್ರಂಥ)
4. ಸಂಕ್ರಮಣ : (ಆಗಸ್ಟ್–ಸೆಪ್ಟೆಂಬರ್ 84)
5. ಮಾತುಗಾರ ರಾಮಣ್ಣ : (ಮಾಸ್ತಿ ವೆಂಕಟೇಶ್ ಅಯ್ಯಂಗಾರ್)

# ಯುವ್ವಾ ಭಾರತೀ

ಯುವ್ವಾ ಭಾರತೀ
ನನಗ ದಿಗಲಾಗೇತಿ
ನೀ ಹ್ಯಾಂಗಾರಽ ತಡಕೊಂತಿ ?

ತಲಿಗೊಂಡ ಜಾತಿ
ಕಲ್ಲಿಗೊಂದೊಂದ ದೇವರಾ ಮಾಡಿ
ಗುದ್ಯಾಡೂ ಮಕ್ಕಳಾ
ಮಂಡಲಾಗಿಟಗೊಂತ
ಹ್ಯಾಂಗಾರಽ ಮುದ್ದಾಡಲೆ ?
ಖಬರಗೆಟ್ಟ ಕನಸ ಕಾಣಕೊಂತ
ಮಲಗಿದ ರಣಗೇಡಿ ಮಕ್ಕಳನ
ಎಬ್ಬಿಸೇನಂತಿ
ಬಾಳೇಕ ಹಚ್ಚೇನಂತಿ

ತಮ್ಮ ತಮ್ಮ ತಿಟವಾಟದಾಗ
ತಾಯೀ ಹೊಟ್ಟೀನಽ ಕೋದು
ಹಂಚಿಕೊಳ್ಳೋ ಈ ಮಕ್ಕಳಿಗೆ
ಕಟಿಗೀ ಹೊರಿ
ತರಿಸಿ ಮುದಿಯಾಕ್ಲ ಚ್ಭಿ ಒಕ್ಕಟ್ಟಿನ
ಕಥಿ ಹೇಳಿದ ಆ ಮುದುಕನ
ಉದಾಹರಣೆ ಕೊಟ್ಟೇನಂತಿ
ದಾರೀಗಿ ತಂದೇನಂತಿ

ನಿನ್ನ ತೇರಿನ ಗಾಲಿ
ಕುರುಡ ನಂಬಿಕೀ ಕೆಸರಾಗ
ತುರಕೇವಿ
ಇಷ್ಟಾದರೂ ಯುವ್ವಾ ...
ನಮನ್ನ ಅಂವಚಿಗೊಂಡೇನಂತಿ
ಪ್ರೀತೀ

ಪ್ರೊ. ಧರಣೇಂದ್ರ ಕುರಕುರಿ, ಪ್ರಿನ್ಸಿಪಾಲ, ಶ್ರೀ ಕುಮಾರೇಶ್ವರ ಪದವಿ ಕಾಲೇಜ,
ಹಾನಗಲ್ಲ-581104

ಸುರದು ಸಲುವೇನಂತಿ; ಬೆಳಸೇನಂತಿ
ನಿಂದೂ ರಗಡs ಕುವ್ವತ್ತು
ಮಕ್ಕಳದಸಿಂದ ಗುದಮುರಗಿ
ಹಾಕೇ ಹಾಕತಿ
ನಿನಗ ನಾವು ಹೊರಿ ಚಿಂತಿ

ಏನs ಆದರೂ ಯವ್ವಾ
ನಾವೆಲ್ಲಾರೂ ನಿನ್ನ ಮಕ್ಕಳs
ಅನ್ನೂದು ಸುಳ್ಳ ಆದೀತು ?
ಕಳ್ಳಿನ ಬಳ್ಳಿ ಹರದ ಹೋದೀತು ?
ಅದಕs ನಮ್ಮ ತಪ್ಪ ಮನ್ನಸ ತಾಯೀ–
ಅಂದರ ಸುಮ್ಮಾ ಯಾಕ ಕುಂತಿ ?

—ಧರಣೇಂದ್ರ ಕುರಕುರಿ

# ಹೀಗೊಂದು ಪ್ರಸಂಗ

ಅದು ದಿನದ ಪ್ರಸವದ ಸಮಯ
ತಾರಸಿಯಿತ್ತು ಮೇಲೆ ಆಕಾಶವಿತ್ತು
ಬೆವರು ಸ್ನಾನದ ನಗರ
ಕತ್ತಲ ತೆಕ್ಕೆಯಲಿ ತೂಕಡಿಸುತಿತ್ತು
ಬೀದಿ ದೀಪಗಳ ಕಾವಲಿಗೆ ಬಿಟ್ಟು
ನಡುವೆ ಸಮೆದ ಪದಗಳನ್ನು
ಜಗಿಯುತ್ತಾ ನಾವು ಕೂತಿದ್ದೆವು

* *

ಹಾಲಲ್ಲದ್ದಿದ ಹತ್ತಿ ನಿನ್ನ ನಗು
ಕುತೂಹಲಕ್ಕೆ ಅದನ್ನು ಹಿಚುಕಿದೆ
ತೇವದ ಅಸ್ಥಿ ಪಂಜರ ಹೊರಬಿತ್ತು
ಮಾಮೂಲು

ಬಂಜಗೆರೆ ಜಯಪ್ರಕಾಶ, 129, ಹಳೇವಿಭಾಗ, ಸ್ನಾತಕೋತ್ತರ ವಿದ್ಯಾರ್ಥಿ ನಿಲಯ,
ಮಾನಸಗಂಗೋತ್ರಿ, ಮೈಸೂರು-570006

ಹಗುರ ಶಬ್ದಗಳು ತೂರಿಕೊಂಡವು
ದಿಕ್ಕುಗಳ ಮನೆಯೊಳಗೆ
ಡಿಕ್ಕಿಸಿದಾಗೆಲ್ಲ ಸೋರುತ್ತಿದ್ದ ಕಣ್ಣುಗಳಲ್ಲಿ
ಕನಸು ಡಿಂಬಗಳ ಅಲೆಗಳಂಥ
ಹಿಂಡಿತ್ತು
ನಾದಿದ ಮೈದಾ ಹಿಟ್ಟಿನ ಮೈ
ತಗುಲುತ್ತಿತ್ತು
ಮಂಜು ಮನಸಿನ ಶೀತ

* *

ಮುಗಿಸಿದರೆ ಮತ್ತೆ ಹಾಡಲಾಗದ
ರಾಗದ ನೀರಿನಲ್ಲಿ ತೇಲುತ್ತಿದ್ದೇವೆ ನಾವು
ಬಟ್ಟೆಗಳ ಮರೆತರೆ ಮಾಂಸ
ಬಿಚ್ಚಿಟ್ಟರೆ, ಬೇಧಗಳ ಕಪ್ಪು
ಕಲಸಿಹೋಗುತ್ತೆ ಅಪರಿಚಿತ
ಪ್ರವಾಹದಲ್ಲಿ
ಹೀಗೆಂದು ಕೊಂಡಾಗ ಮಾತ್ರ
ನಾನು ನೀನು ಮರೆತು ಹೋಗುತ್ತೆ

* *

ಕ್ಷಮಿಸು–
ಕವನವಾಗಬೇಕೆಂಬ ನನ್ನ ಗೆಳತಿ
ಚಂದ್ರಮುಖಿಯೆನಲಾರೆ ನಿನ್ನ
ಹೂ, ಲತೆ, ತಾರೆ ಕೂಡ :
ಕವಿ ಸಮಯಗಳ ಗರ್ಭಪಾತವಾಗಿದೆ
ಸಹಿಸಿಕೋ–
ರಾತ್ರಿಯ ದಪ್ಪ ಪದರಿನಲ್ಲಿ ನಿನ್ನ
ಹೊಂಗೂದಲು ಹೊಳೆಯದಿರಬಹುದು
ಕ್ಲೀಷೆಗಳ ಹುದುಲು ಮಕ್ಕಳಲ್ಲಿನ
ಕವಿತೆಗಳು ನಿನ್ನ
ಹುತಾತ್ಮಳನ್ನಾಗಿಸದಿರಬಹುದು

—ಬಂಜಗೆರೆ ಜಯಪ್ರಕಾಶ

# ಬದುಕು

ಬದುಕು
ಸಂಕೀರ್ಣ. ಸವಾಲು. ಪ್ರಶ್ನಾತ್ಮಕ ಎಂದೆಲ್ಲ
ಅನಿಸಿದಾಗ ಹುತ್ತವಾಗುತ್ತೇನೆ
ಗೆದ್ದಲು ಕಟ್ಟಿದ ಮಣ್ಣಿನ ಗೂಡಿನಲ್ಲಿ
ಹಾವು ವಾಸಮಾಡಿದಂತಾಗುತ್ತದೆ.
ತೆವಳುತ್ತ ನರಳುತ್ತ ಜೀವನ ಸಾಗುತ್ತದೆ.

ಪ್ಲೇಟೋ.
ತನ್ನ ಆದರ್ಶ ರಾಜ್ಯದಿಂದ
ಕವಿಗಳನ್ನು ಉಚ್ಚಾಟನೆ ಮಾಡಿದಂತೆ
ನನ್ನ ಆದರ್ಶಾನಿಸಿಕೆಗಳನ್ನು ಉಚ್ಚಾಟನೆ ಮಾಡಿ
ಬೆಟ್ಟದ ಬಂಡೆಯಂತೆ
ನಿರ್ಲಿಪ್ತವಾಗಿದ್ದು ಬಿಡಬೇಕೆಂದೆನಿಸಿ
ಎಷ್ಟೋ ಭಾರಿ ಜಡವಾಗಿ
ಆ ಜಡತ್ವ ನನ್ನನ್ನು ಹುಚ್ಚನನ್ನಾಗಿಸಿದೆ.
ಆ ಹುಚ್ಚಿನಲ್ಲಿ ನನ್ನ ದೃಷ್ಟಿ ಯಾವುದೋ ಅದೃಶ್ಯಲೋಕವನ್ನು
ಸೇರಿ-ಮನಸ್ಸಿನ ಪಾತಾಳಿಯ ಸುಪ್ತಸ್ತರಗಳ
ಭಾವನೆಗಳ ಆಮೂಲಾಗ್ರವಾಗಿ ತಡಕಾಡಿ
ಒಮ್ಮೆಲೆ ಅಪ್ಪಳಿಸಿ-ನನ್ನ ಭಾವನೆಗಳನ್ನೆಲ್ಲ ಛಿ
ದ್ರಛಿದ್ರವಾಗಿ :
ಅಸ್ತವ್ಯಸ್ತವಾಗಿ ಹರಡಿ
ಒಡೆದ ಕನ್ನಡಿಯ ಚೂರುಗಳಲ್ಲಿ
ಮುಖವನ್ನು ಕಂಡಂತಹ ಅನುಭವವಾಗಿ
ದಿಕ್ಕೇ ತೋಚದಾಗುತ್ತದೆ.

ಯಾವುದೋ ಸ್ಪಷ್ಟ ಆಕೃತಿಯನ್ನು ಪಡೆಯುವ
'ಆಕೃತಿಗಳಲ್ಲಿ' ಬದುಕು ಹಲ್ಕಿರಿದು ಹಂಗಿಸುತ್ತದೆ.
ಆಗ-ಅಸ್ತಿತ್ವವಾದಿಯಾದ ನಾನು ಬಂಡನಾಗುತ್ತೇನೆ
ತತ್ಫಲವಾಗಿ ಭ್ರಮಾಲೋಕದಲ್ಲಿ ಚಕ್ರವಾಗುತ್ತೇನೆ.

ನರೇಂದ್ರ ಕಟ್ಟಿ, 250-ಬಿ, 3ನೇ ಬ್ಲಾಕ್, 5ನೇ ಕ್ರಾಸ್, ರಾಜಾಜಿನಗರ, ಬೆಂಗಳೂರು-10

ಇಷ್ಟೆಲ್ಲ ಆದರೂ ; ವಿಕ್ಷಿಪ್ತವಾಗಿ ಬದಲಾದರೂ
ಸಂಬಂಧದ ತಂತಿಗಳಿಂದ
ಬಂಧಿತವಾಗಿರುವುದರ ಅನುಭವವಾಗಿ
ಕೈಕಾಲುಗಳು ಗಂಟಿಗೊಳಪಟ್ಟಂತಾಗಿ
ಸಡಿಲವಾಗಿ ಆಡಿಸಲಾರದೆ ತತ್ತರಿಸುತ್ತೇನೆ.

ಕೆಲವೊಮ್ಮೆ
ದುಷ್ಟ ಶಕ್ತಿಗಳ ಸೂಕ್ಷ್ಮಾತಿಸೂಕ್ಷ್ಮ ರಾಜಕಾರಣಗಳಿಗೆ
ಬಲಿಯಾಗಿ ಬಿಡುತ್ತೇನೆ.
ಹೇಗೆ ? ಎಂಬುದಕ್ಕಿಂತ ಏತಕ್ಕೆ ? ಎಂಬ ಪ್ರಶ್ನೆ ಭೂತವಾಗುತ್ತದೆ.
ಬದುಕು ಪ್ರಶ್ನಾತ್ಮಕವೆನಿಸುತ್ತದೆ.
ಭಂಡತನ ಮೊಳೆತು ಚಿಗುರುತ್ತದೆ ;
ಬದುಕು ಸವಾಲು ಅನಿಸುತ್ತದೆ.

ನಿಷೇಧ ವಾತ್ಸಲ್ಯ ಧರ್ಮ ಪ್ರೇಮ ಕಾಮ
ಎಲ್ಲವೂ ಒಮ್ಮೆಲೆ ಕಾಡುತ್ತದೆ.
ಹೊಟ್ಟೆಯ ಸಿಟ್ಟು ರೆಟ್ಟೆಯಾಗಿ
ಬದುಕು ಸಂಕೀರ್ಣವಾದಂತೆ ಅನಿಸಿ
ನಂತರ ಯೋಚಿಸಿ ನನಗರಿವಿಲ್ಲದಂತೆಯೇ
ವ್ಯವಸ್ಥೆಯ ಅಂಗವಾಗಿ ಬದಲಾಗುತ್ತೇನೆ.
ಆಗ ಬದುಕು ಸರಳ ಅನ್ನಿಸುತ್ತೆ.

—ನರೇಂದ್ರ ಕಟ್ವೆ

---

ಒಂದಿಷ್ಟು ಜಾಗ ಕೊಡಿ ನನಗೆ ಈ ಮನೆಯಲ್ಲಿ
ನಾನು ಒಬ್ಬ ಕವಿ
ನನಗೆ ಬೇಕಾದದ್ದು ಹೃದಯವಿರುವಂತ
ಐದೋ ಆರೋ ಕವಿ.

—ಜಿ. ಎಸ್. ಶಿವರುದ್ರಪ್ಪ

---

# ಪುರಾಣ, ಇತಿಹಾಸ ಮತ್ತು ವರ್ತಮಾನ

—ಬರಗೂರು ರಾಮಚಂದ್ರಪ್ಪ

ಪುರಾಣಗಳೆಂದರೆ ಪುಣ್ಯಕತೆಗಳು. ಇತಿಹಾಸವೆಂದರೆ ಗತ ವೈಭವದ ಹೆಮ್ಮೆ-ಎಂಬ ಸಾಮಾನ್ಯ ಭಾವನೆ ಬಲವಾಗಿರುವ ಸಂದರ್ಭದಲ್ಲಿ ಸಾಹಿತ್ಯ ಮತ್ತು ಸಮಕಾಲೀನತೆಗಳ ನೆಲೆಯಿಂದ ಇವುಗಳನ್ನು ಪರಿಶೀಲಿಸುವ ಅಗತ್ಯವಿದೆ. ಇವುಗಳು ಸಮಕಾಲೀನ ಸಾಹಿತ್ಯ ಸಂದರ್ಭದಲ್ಲಿ ಬಳಕೆಯಾಗುವ ವಿಧಾನದ ಬಗ್ಗೆಯೂ ವಿವೇಚಿಸಬೇಕಾಗಿದೆ.

ಪುರಾಣವನ್ನು "ಅತ್ಯಂತ ಸಂಕೀರ್ಣವಾದ ಸಾಂಸ್ಕೃತಿಕ ಸತ್ಯ" Mircea Eliade-in ‹Myth, Rites, Symbols') ಎಂದು ಕರೆಯುವುದುಂಟು. ಅಲ್ಲದೆ ಪುರಾಣ ಒಂದು ಪವಿತ್ರಕತೆಯೆಂದೂ, ಅದು ಯಾವಾಗಲೂ ಸತ್ಯಗಳಿಗೇ ಸಂಬಂಧಿಸಿದ್ದರಿಂದ 'ಸತ್ಯೇತಿಹಾಸ' ವೆಂದು ಪರಿಗಣಿಸಲಾಗುತ್ತಿದೆ. (Mircea Eliade) ಈ ಕಾರಣಗಳಿಂದ ಪುರಾಣವನ್ನು "ಭೂತಕಾಲದ ಪವಿತ್ರ ಇತಿಹಾಸ" ಎಂದೂ ನಂಬಲಾಗಿದೆ. ಆದರೆ ನಿಜವಾದ ಇತಿಹಾಸ ಇದಕ್ಕಿಂತ ಭಿನ್ನ ನೆಲೆ ಹೊಂದಿದೆ. ಇತಿಹಾಸ ಅಥವಾ ಚರಿತ್ರೆಯನ್ನು ರಾಜರ ಮತ್ತು ರಾಜಮನೆತನಗಳ ಉನ್ನತಿ-ಅವನತಿಗಳ ಕಾಲಾನುಕ್ರಮಣಿಕೆಯ ದಾಖಲೆ ಎಂದು ಸಾಮಾನ್ಯವಾಗಿ ಪರಿಗಣಿಸಲಾಗುತ್ತಿದ್ದು, ಈ ವಿಚಾರವೂ ತಪ್ಪು ಕಲ್ಪನೆಯಿಂದ ಕೂಡಿದೆ. ಈ ಸಾಂಪ್ರದಾಯಿಕ ವಿವರಣೆಗೆ ಹೊರತಾದ ನಿಜ ವಿಚಾರಗಳೂ ನಮ್ಮಲ್ಲಿವೆ. ಡಿ. ಡಿ. ಕೊಸಾಂಬಿಯವರ ಪ್ರಕಾರ "ಉತ್ಪಾದನೆಯ ಸಂಬಂಧ ಮತ್ತು ಸಾಧನೆಗಳ ಕ್ರಮಾಗತ ಬೆಳವಣಿಗೆಯನ್ನು ಕಾಲಾನುಕ್ರಮಾಣಿಕೆಯಲ್ಲಿ ಪರಿಚಯಿಸುವುದೇ ಇತಿಹಾಸ''.

"ರಾಜಕೀಯ ಇತಿಹಾಸ ಮತ್ತು ರಾಜವಂಶಗಳ ಅಧ್ಯಯನಗಳು ಚಾರಿತ್ರಿಕ ವ್ಯಾಖ್ಯೆಯ ಮುಖ್ಯ ಸಂಗತಿಗಳು" ಎಂದು ಒಪ್ಪುತ್ತಲೇ ರೊಮಿಲಾಥಾಪಾರ್ ಅವರು "ಈ ಸಂಗತಿಗಳನ್ನು ಜನ ಮತ್ತು ಸಂಸ್ಕೃತಿಯನ್ನು ರೂಪಿಸುವ ಇತರೆ ಲಕ್ಷಣಗಳ ಬೆಳಕಿನಲ್ಲಿ ಕಂಡುಕೊಳ್ಳಬೇಕಾಗಿದೆ" ಎಂದು ಹೇಳುತ್ತಾರೆ. ಮುಂದುವರೆದು "ರಾಜಕೀಯ ವಿನ್ಯಾಸದಲ್ಲಿ ಆಗುವ ಬದಲಾವಣೆಗಳು ಆರ್ಥಿಕ ಸ್ವರೂಪದ ಬದಲಾವಣೆಗಳ ತೀವ್ರ ಸಂಬಂಧವನ್ನು ಪಡೆದಿರುತ್ತವೆ ಮತ್ತು ಇದರ ಪರಿಣಾಮ ಸಾಮಾಜಿಕ ಸಂಬಂಧಗಳ ಮೇಲೂ ಇರುತ್ತದೆ" ಎಂದಿದ್ದಾರೆ. ಇತಿಹಾಸವನ್ನು ಅರ್ಥೈಸುವ ಈ ವಿಧಾನ ಸೂಕ್ತವಾಗಿದೆ ಎನ್ನಬಹುದು.

---

ಬರಗೂರು ರಾಮಚಂದ್ರಪ್ಪ, ಕನ್ನಡ ವಿಭಾಗ, ಜ್ಞಾನಭಾರತಿ, ಬೆಂಗಳೂರು-560056

ಈಗ ಪುರಾಣ ಮತ್ತು ಸಾಹಿತ್ಯದ ಸಂಬಂಧವನ್ನು ಪರಿಶೀಲಿಸೋಣ. ನಾರ್ಥರಾಪ್ ಫ್ರೈ (Northrop Frye) ಪ್ರಕಾರ "ಪುರಾಣ ಸಾಹಿತ್ಯದಲ್ಲೇ ಇರುವ ರಚನಾ ವಿಧಾನದ ಒಂದು ಅಂಶ. ಯಾಕೆಂದರೆ ಒಟ್ಟಾರೆಯಾಗಿ ಸಾಹಿತ್ಯವು 'ಸ್ಥಳಾಂತರಗೊಂಡ' ಪುರಾಣಶಾಸ್ತ್ರ." ಪುರಾಣಶಾಸ್ತ್ರದ ಸ್ಥಳಾಂತರಗೊಳ್ಳುವಿಕೆಯನ್ನು ಕೆಲವರು ಜಾನಪದ ಕಥೆ, ಲಾವಣಿ ಮುಂತಾದ ರೂಪಗಳಲ್ಲಿ ಗುರುತಿಸುತ್ತಾರೆ. Schlegel ಎಂಬಾತನ ಅಭಿಪ್ರಾಯದಲ್ಲಿ "ಪುರಾಣಶಾಸ್ತ್ರ ಮತ್ತು ಕಾವ್ಯ ಬೇರ್ಪಡಿಸಲಾಗದ ಒಂದೇ ವಿಭಾಗ". Mark Schorer "ಪುರಾಣವು ಕಾವ್ಯದಿಂದ ಬೇರ್ಪಡಿಸಲಾಗದ ಉಪರಚನಾ ರೂಪ" ವೆಂದರೆ Richard Chase "ಕಾವ್ಯವು ಪುರಾಣದಿಂದ ಬೇರ್ಪಡಿಸಲಾಗದ ಉಪರಚನಾರೂಪ" ಎನ್ನುತ್ತಾನೆ.

ಈ ಎಲ್ಲಾ ಮಾತುಗಳು ಕಾವ್ಯ ಅಥವಾ ಒಟ್ಟಾರೆ ಸಾಹಿತ್ಯದೊಂದಿಗೆ ಪುರಾಣಕ್ಕಿರುವ ಸಂಬಂಧವನ್ನು ಸ್ಪಷ್ಟಪಡಿಸುತ್ತವೆ ; ಒಂದರೊಳಗೊಂದು ತಳಕು ಹಾಕಿಕೊಳ್ಳುವ ರಚನಾಕ್ರಮವನ್ನು ಗುರುತಿಸುತ್ತವೆ.

ಪುರಾಣ ಮತ್ತು ಸಾಹಿತ್ಯದ ನಡುವಿನ ವ್ಯತ್ಯಾಸಗಳನ್ನು ಗುರುತಿಸಿದವರೂ ಇದ್ದಾರೆ. "ಪುರಾಣವು ಸಾಹಿತ್ಯೇತರವಾದದ್ದು" ಎನ್ನುವ C.S. Lewis ಮುಂದುವರಿದು ಹೀಗೆ ಹೇಳುತ್ತಾನೆ: "ಪುರಾಣದ ಮೌಲ್ಯ, ನಿರ್ದಿಷ್ಟವಾದ ಸಾಹಿತ್ಯಕ ಮೌಲ್ಯವಲ್ಲ ಮತ್ತು ಪುರಾಣದ ಮೆಚ್ಚುಗೆ, ನಿರ್ದಿಷ್ಟವಾದ ಸಾಹಿತ್ಯಾನುಭವವೂ ಅಲ್ಲ." ಲೇವಿಸ್ ಸಾಹಿತ್ಯ ಮತ್ತು ಪುರಾಣಗಳ ಮೌಲ್ಯ ಮತ್ತು ಅನುಭವ ವಿಧಾನಗಳನ್ನು ಹೀಗೆ ವ್ಯಾಖ್ಯಾನಿಸಿದರೆ ಕೆ. ಕೆ. ರೂತ್ವೆನ್ (K.K. Ruthven) ಈ ಎರಡರ ಸೃಷ್ಟಿಕ್ರಿಯೆ ಕುರಿತು ವ್ಯಾಖ್ಯಾನಿಸುತ್ತಾನೆ. ರೂತ್ವೆನ್ ಹೇಳುವಂತೆ "ಪುರಾಣವೊಂದು ತೆರೆದ ಮುಕ್ತಾಯದ ಪ್ರಕ್ರಿಯೆ." ಅಂದರೆ ಪುರಾಣಕ್ಕೆ ಯಾರಾದರೂ ತಮ್ಮ ಕೊಡುಗೆ ಸಲ್ಲಿಸಬಹುದು : ಬೆಳೆಸಬಹುದು. ಆದರೆ ಸಾಹಿತ್ಯದ ವಿಷಯದಲ್ಲಿ ಇದು ಸಾಧ್ಯವಿಲ್ಲ. ಯಾಕೆಂದರೆ ರೂತ್ವೆನ್ ಹೇಳುವಂತೆ "ಸಾಹಿತ್ಯ ಕೃತಿಯೊಂದು ಮುಗಿದ ಉತ್ಪನ್ನ."

ಕೆಲವು ಭಿನ್ನಾಭಿಪ್ರಾಯಗಳಿದ್ದರೂ, ಪುರಾಣವೂ ಸಾಹಿತ್ಯ ಸಂಬಂಧಿಯೆಂದು ಅನೇಕರು ಒಪ್ಪಿದ್ದಾರೆ. ಇತರೆ ಸಾಹಿತ್ಯ ಪ್ರಕಾರಗಳ ಸೃಷ್ಟಿಕ್ರಿಯೆಗೂ ಪುರಾಣ ರಚನಾಕ್ರಮಕ್ಕೂ ವ್ಯತ್ಯಾಸವಿರುವುದಾದರೂ ಅದನ್ನೇ ಪ್ರತ್ಯೇಕ ಪ್ರಕಾರವೆಂದು ಪರಿಗಣಿಸಿ ಸಾಹಿತ್ಯ ದೃಷ್ಟಿಯಿಂದಲೂ ಪರಿಶೀಲಿಸಬಹುದು.

ಪುರಾಣವನ್ನು ನಮ್ಮ ಸಂದರ್ಭದಲ್ಲಿ ಹೇಗೆ ಬಳಸಿಕೊಳ್ಳಬೇಕೆಂಬ ಬಗ್ಗೆಯೂ ಚರ್ಚೆಗಳಾದಾಗ ಪುರಾಣಗಳು 'ಪ್ರಾಚೀನ' ಕೃತಿಗಳಾಗಿ ವಿಮರ್ಶೆಯನ್ನು ತಪ್ಪಿಸಿ

ಕೊಂಡು ನಿಲ್ಲುವಂತೆ ಮಾಡಿದ ನಮ್ಮ ನಂಬಿಕೆಗಳ ನಡುವೆ ಈ ಚರ್ಚೆ ಮುಖ್ಯವೂ ಹೌದು. ನಾವು ಪುರಾಣದ ಪ್ರತಿ ವಿವರಗಳೂ "ಸಾಂಸ್ಕೃತಿಕ ಸತ್ಯ"ಗಳೆಂದು ಒಪ್ಪ ಬೇಕಾಗಿಲ್ಲ. ಹಾಗೆಂದಾಕ್ಷಣ ಅವುಗಳನ್ನು ತಿಪ್ಪೆಗೂ ಎಸೆಯ ಬೇಕಾಗಿಲ್ಲ. ಅವುಗಳ ನೆಲೆ–ನಿಲುವುಗಳನ್ನು ಶೋಧಿಸಿ, ಅನಾವರಣಗೊಳಿಸುವ ಮೂಲಕ ಹೊಸ ಅರಿವು ಮೂಡಿಸಬೇಕಾಗಿದೆ. ಆದ್ದರಿಂದಲೇ ಆಧುನಿಕ ಬರಹಗಾರರ ಪುರಾಣ ಪ್ರಜ್ಞೆ ಪ್ರಶ್ನಾರ್ಹವಾಗಿರುವುದುಂಟು. ಕೆ. ಕೆ. ರೂತ್ವೆನ್ ಪುರಾಣ ಪ್ರಜ್ಞೆಯ ಆಧುನಿಕ ಲೇಖಕರನ್ನು 'Living fossils' 'Psycho Pathological degenerate' ಎಂದು ಕಟು ಮಾತುಗಳಿಂದ ಕರೆದು "ಬೌದ್ಧಿಕವಾಗಿ ಹೆಳವರಾದವರಿಗೆ ಮಾತ್ರ ಪುರಾಣಗಳಿಂದ ಪ್ರಯೋಜನವಾಗುತ್ತದೆ" ಎಂದಿದ್ದಾರೆ. ವಾಲ್ಟೇರ್ ಸಹ ಇದೇ ರೀತಿಯ ಅಭಿಪ್ರಾಯ ಹೊಂದಿದ್ದು "ಪುರಾಣಗಳ ಅಧ್ಯಯನ ಹೆಡ್ಡರ ಉದ್ಯೋಗ" ಎನ್ನುತ್ತಾನೆ. ಇವರ ಮಾತುಗಳನ್ನು ಕೆಲವರು ನಮ್ಮ 'ಬೌದ್ಧಿಕ ಪ್ರಬುದ್ಧತೆ'ಯ ಹೆಸರಿನಲ್ಲಿ ನಿರಾಕರಿಸುವುದು ಸುಲಭ. ಆದರೆ ಅದರಿಂದ ಸಮಸ್ಯೆಯನ್ನು ಅರ್ಥಮಾಡಿಕೊಂಡಂತಾಗುವುದಿಲ್ಲ. ನಮ್ಮ ಕಣ್ಣೆದುರಿನ ಬದುಕು ಕೈಕಾಲುಗಳಿಗೆ ತೊಡರುತ್ತಲೇ ಇರುವಾಗ ಆಧುನಿಕ ಲೇಖಕನೊಬ್ಬ ಹಿಂದಕ್ಕೆ ಅಂದರೆ ಪುರಾಣಕ್ಕೆ ಯಾಕೆ ಹೋಗುತ್ತಾನೆಂಬುದು ಆತನ ಒಲವು-ನಿಲುವುಗಳ ಸೂಚನೆಯಾಗಿರುವಂತೆ, ಇಲ್ಲಿ ಹೊಂದಿದ ಮಾನಸಿಕ ಪ್ರಕ್ರಿಯೆಯ ಪ್ರಶ್ನೆಯೂ ಆಗಿರಬಹುದು. ಇದು ವಸ್ತುವಿಗಾಗಿ ಇತಿಹಾಸದ ಮೊರೆಹೋಗುವ ಆಧುನಿಕ ಲೇಖಕರಿಗೂ ಅನ್ವಯಿಸುವ ವಿಚಾರ. ಇಲ್ಲಿ ಒಂದು ಮಾತನ್ನು ಸ್ಪಷ್ಟಪಡಿಸಬೇಕು. ಪುರಾಣ, ಇತಿಹಾಸಗಳನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡುವುದು ಬೇರೆ. ಅನುಭವ–ಅಭಿವ್ಯಕ್ತಿಗಳಿಗಾಗಿ ಅವುಗಳ ಮೊರೆ ಹೋಗುವುದು ಬೇರೆ. ಮೊದಲನೆಯ ಕೆಲಸ ಪ್ರತಿಕಾಲಘಟ್ಟದಲ್ಲೂ ಆಗಬೇಕಾದ್ದು. ಆದರಿಂದ ಪುರಾಣಕೃತಿ ಮತ್ತು ಇತಿಹಾಸದ ಮೌಲ್ಯಮಾಪನ ನಡೆಯುತ್ತದೆ. (ಅಷ್ಟು ಕಟುವಾಗಿ ಮಾತನಾಡುವ ಕೆ. ಕೆ. ರೂತ್ವೆನ್ 'ಸಾಹಿತ್ಯದೊಂದಿಗಿನ ಸಂಬಂಧದಿಂದಾಗಿ ಪುರಾಣ ಶಾಸ್ತ್ರದ ಪ್ರಾಮುಖ್ಯ'ವನ್ನು ಒಪ್ಪುತ್ತಾನೆ. ತಾನೂ ಮೌಲ್ಯಮಾಪನ ಮಾಡುತ್ತಾನೆ.) ಇದೇ ಮೌಲ್ಯಮಾಪನ ಸೃಜನಶೀಲ ಕೃತಿಗಳಲ್ಲೂ ನಡೆಯಬಹುದಾದರೂ, ಆಧುನಿಕ ಲೇಖಕನೊಬ್ಬ ಅನುಭವ–ಅಭಿವ್ಯಕ್ತಿಗಳಿಗಾಗಿ ಹಿಂದಕ್ಕೂ ಯಾಕೆ ಹೋಗುತ್ತಾನೆ ಎಂಬುದು ನನ್ನ ಪ್ರಶ್ನೆ. ತಾನು ಬದುಕುತ್ತಿರುವ ಸಂದರ್ಭದಲ್ಲಿ ಕಂಡುಬರುವ ಪುರಾಣ, ಇತಿಹಾಸಗಳ ಸಾಮ್ಯ ಕೆಲವೊಮ್ಮೆ ಆತನನ್ನು ಅಲ್ಲಿಗೆ ಕರೆದೊಯ್ಯಬಹುದಾದರೂ, ಅದೇ ಪ್ರಧಾನ ವಸ್ತುವಾಗುವುದು ಏಕೆ? ಸಮಕಾಲೀನ /ಬದುಕಿನ ವಿವರಗಳು ವಸ್ತು ವಿನ್ಯಾಸವಾಗದೆ ಹೋದರೆ ಆ ಲೇಖಕನ ಮನಸ್ಸು ಎಷ್ಟರ ಮಟ್ಟಿಗೆ ಇಲ್ಲಿದೆ? ಕಣ್ಣೆದುರಿಗಿನ ಈ

ಬದುಕು ಮಾನಸಿಕ ಪ್ರಕ್ರಿಯೆಯ ಒಂದು ಭಾಗವಾಗಿದ್ದರೆ ಅದರ ವಿವರಗಳೇ ವಸ್ತುವಾಗಿ ಯಾಕೆ ರೂಪುಗೊಳ್ಳುವುದಿಲ್ಲ ? ಈ ಪ್ರಶ್ನೆಗಳಿಗೆ ನನಗೆ ಹೊಳೆಯುವ ಉತ್ತರ ಇಂಥ ಆಧುನಿಕ ಲೇಖಕರು ಇಲ್ಲಿದ್ದೂ ಹಿಂದಿನ ಪುರಾಣ, ಇತಿಹಾಸ ಸಂದರ್ಭಗಳೊಂದಿಗೆ ಮಾನಸಿಕ ಸಂಬಂಧ ಮತ್ತು ಸಂವಾದವನ್ನು ಸ್ಥಾಪಿಸಿಕೊಂಡಿರುತ್ತಾರೆ. ಈ ಕಾರಣದಿಂದ ಅವರಿಗೆ ಅಲ್ಲಿ ಹೋಗಿ ವಸ್ತುಗಳನ್ನು ಹೆಕ್ಕಿ ತೆಗೆಯುವುದು ಸುಲಭವಾಗುತ್ತದೆ. ಇದೊಂದು ಮಾನಸಿಕ ಪ್ರಕ್ರಿಯೆಗೆ ಸಂಬಂಧಿಸಿದ ಸಮಸ್ಯೆ. ಆದ್ದರಿಂದ ಇದು 'ಪಲಾಯನ ಕ್ರಿಯೆ'ಯೂ ಯಾಕೆ ಆಗಿರಬಾರದೆಂಬ ಪ್ರಶ್ನೆ ನನ್ನ ಮುಂದಿದೆ. ಪುರಾಣ, ಇತಿಹಾಸಗಳಲ್ಲೇ ಶ್ರೇಷ್ಠತೆ ಮತ್ತು ಮೋಕ್ಷವನ್ನು ಕಂಡುಕೊಳ್ಳುವವರ ಬಗ್ಗೆ 'ಪಲಾಯನ ಕ್ರಿಯೆ'ಯ ಸಂಬಂಧವನ್ನು ಕಲ್ಪಿಸಬಹುದಾದರೂ ಆಧುನಿಕ ಆಲೋಚನೆಗಳ ಹಿನ್ನೆಲೆಯಲ್ಲಿ ಪುರಾಣ, ಇತಿಹಾಸಗಳ ಒಳಹೊಕ್ಕು ಹುಡುಕಾಡುವವರಿಗೆ ಇಷ್ಟು ಸುಲಭವಾಗಿ ಪಲಾಯನ ಕ್ರಿಯೆಯ ಸಂಬಂಧ ಕಲ್ಪಿಸುವುದು ಸರಿಯೆ ಎಂಬ ಪ್ರಶ್ನೆಯೂ ನನಗೆ ಮುಖ್ಯ. ಈ ಪ್ರಶ್ನೆಗೆ ಉತ್ತರ ಹುಡುಕುತ್ತಾ ಹೋದಂತೆ ಇಂಥವರ ಮೆದುಳು ವರ್ತಮಾನದಲ್ಲಿದ್ದು, ಈ ವರ್ತಮಾನಕ್ಕೆ ಹೊಂದದ ಮನಸ್ಸು ಪುರಾಣ ಇತಿಹಾಸಗಳಲ್ಲಿ ಸಂಬಂಧ ಸ್ಥಾಪಿಸಿರುವ ದ್ವಂದ್ವ ಕಾಣಿಸುತ್ತದೆ. ಈ ದ್ವಂದ್ವವನ್ನು ನಿವಾರಿಸಿಕೊಳ್ಳುವ ಕ್ರಿಯೆಯಾಗಿ ಇವರ ಸಾಹಿತ್ಯದ ಸ್ವರೂಪ ಬೇರೆಯಾಗುತ್ತದೆ. ಅಂದರೆ ಆಧುನಿಕ ಮೆದುಳು ಮತ್ತು ಹಿಂದಿನ ಮನಸ್ಸುಗಳ ನಡುವೆ ಹೊಂದಾಣಿಕೆ ತರುವ ಸಾಹಿತ್ಯ ಸ್ವರೂಪ ಪ್ರಕಟವಾಗುತ್ತದೆ. ಇಲ್ಲಿ ಒಂದಂತೂ ಸ್ಪಷ್ಟ. ಸಂವೇದನೆಗೆ ಮೂಲವಾದ ಮನಸ್ಸು ವರ್ತಮಾನಕ್ಕಿಂತ ಹೆಚ್ಚಾಗಿ ಪುರಾಣ, ಇತಿಹಾಸಗಳಿಗೇ ಹೊಂದಿಕೊಳ್ಳುವುದರಿಂದ ಸಾಹಿತ್ಯ ಕಟ್ಟಡದ ಸಾಮಗ್ರಿಯೆಲ್ಲ ಅಲ್ಲಿಂದ ಆಮದಾಗುತ್ತದೆ. ಒಟ್ಟಿನಲ್ಲಿ ಪುರಾಣ, ಇತಿಹಾಸಗಳಲ್ಲೇ ಸಂಪೂರ್ಣ ಮೋಕ್ಷ ಕಾಣುವವರನ್ನು ಕೆ. ಕೆ. ರೂತ್ವೆನ್ ಹೇಳುವಂತೆ 'living fossils' ಎನ್ನಬಹುದಾದರೂ ಆಧುನಿಕ ಹಿನ್ನೆಲೆಯಲ್ಲಿ ಪುರಾಣ, ಇತಿಹಾಸಗಳ ಒಳಹೋಗುವವರನ್ನು ಹೀಗೆಂದು ಸುಲಭವಾಗಿ ಕರೆಯಲಾಗದು. ಆದರೆ ಇಂಥವರ ಸೃಜನಶೀಲ ಕ್ರಿಯೆಯಲ್ಲಿ, ಮಾನಸಿಕವಾಗಿ ಪಲಾಯನ ಪ್ರಕ್ರಿಯೆಯ ಪಾಲೂ ಇರುವುದನ್ನು ಗುರುತಿಸಬಹುದು. ಪಲಾಯನದ ಮನಸ್ಸನ್ನು ಮೆದುಳು ಕಟ್ಟಿ ಹಾಕುವ ಕ್ರಿಯೆ ಇಲ್ಲಿ ಕಾಣಿಸುತ್ತದೆ. ಆದರೆ ಇದು ಮೊದಲೇ ನಡೆಯುವ ನಿಯಂತ್ರಣ ಕ್ರಿಯೆಯಲ್ಲ. ಮನಸ್ಸನ್ನು ಹಿಂಬಾಲಿಸಿ, ಅದು ನಿಂತಲ್ಲಿ ನಿಂತು, ಅಲ್ಲಿಂದ ಆಧುನಿಕತೆಗೆ ಸಂಬಂಧ ಸ್ಥಾಪಿಸುವ ಮೆದುಳಿನ ಕೆಲಸ ಇದು. ಇಲ್ಲದಿದ್ದರೆ ಆಧುನಿಕ 'ಆತ್ಮ'ಕ್ಕೆ ಪ್ರಾಚೀನ ದೇಹಧಾರಣೆ ಹೇಗೆ ಸಾಧ್ಯ ? ಆಧುನಿಕ ಆತ್ಮ ತನಗಿಂತ ಹಿಂದಿನವರಲ್ಲಿ ನಡೆಸಿದ ಹುಡುಕಾಟದ ಫಲವಾಗಿ ರೂಪುಗೊಳ್ಳುವ ಕೃತಿಯು ದೇಹವಲ್ಲಿ. ಆತ್ಮವನ್ನೇ ಮತ್ತೆ ಹುಡುಕುತ್ತ

ಹೊರಡುವ ವಿಮರ್ಶೆಯ ಕೆಲಸ ಒಂದು ಆಧುನಿಕ ವಿಪರ್ಯಾಸವಾಗುತ್ತದೆ. ಯಾಕೆಂದರೆ ಈ ಆಧುನಿಕ 'ಆತ್ಮ' ಪುರಾಣ ಇತಿಹಾಸಗಳ ದೇಹದಲ್ಲಿ ಸೇರಿಹೋಗಿರುತ್ತದೆ ಮತ್ತು ಸೃಷ್ಟಿಸುವಾಗ ಯಾವ 'ಆತ್ಮ'ದ ಹಿನ್ನೆಲೆಯಲ್ಲಿ ಹುಡುಕಾಟ ನಡೆಯಿತೊ, ಮತ್ತೆ ಅದಕ್ಕೇ ಹುಡುಕಾಟ ನಡೆಸುವ ವಿಮರ್ಶೆಯ ಕೆಲಸ ವಿಚಿತ್ರವಾದುದು; ಆದ್ದರಿಂದ ಇದೊಂದು ಸಮಸ್ಯೆಯ ಸ್ವರೂಪ ಹೊಂದಿದೆ. ಈ ಸಮಸ್ಯೆ ಸಾಹಿತ್ಯ ಸಂದರ್ಭವೊಂದರ ಸಮಸ್ಯೆಯಲ್ಲ, ಸಾಹಿತಿಯ ಸಮಸ್ಯೆ ಇದನ್ನು ನಮ್ಮ ಸಂದರ್ಭದಲ್ಲಂತೂ ಸಾರ್ವತ್ರಿಕಗೊಳಿಸುವ ಅಗತ್ಯ ಕಾಣುತ್ತಿಲ್ಲ.

ಇನ್ನು ಸೃಜನಶೀಲ ಸಾಹಿತ್ಯದಲ್ಲಿ ಪುರಾಣ, ಇತಿಹಾಸಗಳ ವಸ್ತುವನ್ನು ನಿರ್ವಹಿಸುವ ಕ್ರಮ ಕುರಿತು ಒಂದು ಮಾತು. ಈ ಕೆಲಸ ಅಗತ್ಯವಾಗಿ ಆ ಕಾಲದ ಹಾಗೂ ವಸ್ತುವಿನ ಪುನರ್ರಚನೆಯಾಗಬೇಕು; ಪುನರ್ರಚನೆಯ ಮೂಲಕ ಹೊರಡುವ 'ಧ್ವನಿ' ನಮ್ಮ ಕಾಲದ ಮುನ್ನೋಟವಾಗಿರಬೇಕು. ಇಲ್ಲದಿದ್ದರೆ ಅಂದಿನ ವಸ್ತು-ವಿಚಾರಗಳಿಗೆ ಇಂದಿನ ಚೌಕಟ್ಟು ಮಾತ್ರ ನಿರ್ಮಾಣವಾಗುತ್ತದೆ. ಹೀಗೆ ಮಾಡುವ ಲೇಖಕ ಆಧುನಿಕ ಕಾಲದಲ್ಲಿ ಕಾಲೂರಿದ್ದರೂ ಕಣ್ಣೂರುವುದು ಹಳೆಯ ಕಾಲದಲ್ಲಿ ಎಂಬ ತೀರ್ಮಾನಕ್ಕೆ ಬರಬೇಕಾಗುತ್ತದೆ. ಆದ್ದರಿಂದ ಇಲ್ಲಿನ ಸೃಜನಶೀಲ ಕ್ರಿಯೆಗೆ ಆಧುನಿಕ ಶೋಧನಾತ್ಮಕತೆ ಲಭ್ಯವಾಗಿ, ಚಲನಶೀಲತೆಯ ನೋಟ ಪ್ರಾಪ್ತವಾಗಬೇಕು. ಇದರ ಸ್ಪಷ್ಟನೆಗಾಗಿ ಒಂದು ಉದಾಹರಣೆ ಕೊಡಬಹುದು. ಬಂಡಾಯ ಸಾಹಿತ್ಯದ ವಿಚಾರ ಬಂದಾಗ ಕೆಲವರು ಹನ್ನೆರಡನೇ ಶತಮಾನದ ವಚನಕಾರರ ಬಂಡಾಯವನ್ನು ಆದರ್ಶವೆಂದು ಭಾವಿಸುವ ಅಪಾಯವಿದೆ. ಕರ್ನಾಟಕದ ಮಟ್ಟಿಗೆ ವಚನ ಚಳವಳಿಯು ಒಂದು ಮಹತ್ವದ ಸಾಮಾಜಿಕ ಬಂಡಾಯ ಎಂಬುದರಲ್ಲಿ ಎರಡು ಮಾತಿಲ್ಲ. ಆದರೆ ಅದನ್ನು ಅರ್ಥಮಾಡಿಕೊಳ್ಳುತ್ತ ಮೆಚ್ಚುತ್ತಾ ಅದನ್ನು ಮೀರುವ ಪ್ರಯತ್ನ ಮಾಡುವುದು ಇಪ್ಪತ್ತನೇ ಶತಮಾನದ ಕ್ರಿಯೆಯಾಗಬೇಕು. ಅದರ ಬದಲು ಇಂದಿನ ವರ್ತಮಾನಕ್ಕೆ ಅಂದಿನ ಆಂದೋಲನವನ್ನು ಆದರ್ಶ ಮಾಡಿಕೊಳ್ಳುವುದು ಹನ್ನೆರಡನೇ ಶತಮಾನದಿಂದೀಚೆಗಿನ ಎಂಟುನೂರು ವರ್ಷಗಳ ಚರಿತ್ರೆಯ ಚಲನಶೀಲತೆಯನ್ನು ಗೌಣಗೊಳಿಸಿದಂತಾಗುತ್ತದೆ. ನಮಗೆ ಪರಂಪರೆಯ ಪ್ರಜ್ಞೆ ಬೇಕು; ಆದರೆ ಪರಂಪರೆಯ ಪೂಜೆಬೇಡ ಅಂದಿನ ವಸ್ತು-ವಿಚಾರಗಳು ಸೃಜನಶೀಲ ಕೃತಿಯಾಗಿ ಮೂಡಿದಾಗಲೂ ನನಗೆ ಈ ಮಾತು ಮುಖ್ಯವಾಗುತ್ತದೆ. ಯಾಕೆಂದರೆ ನನ್ನ ದೃಷ್ಟಿಯಲ್ಲಿ ಪುರಾಣ, ಇತಿಹಾಸಗಳ ವೈಭವೀಕರಣವೆಂದರೆ ವಾಸ್ತವದ ವಂಚನೆ ಮತ್ತು ಆತ್ಮವಂಚನೆ. ಪರಂಪರೆ ಇರುವುದು ಅರ್ಥಮಾಡಿಕೊಳ್ಳುವುದಕ್ಕಾಗಿಯೇ ಹೊರತು ಆರಾಧನೆಗಲ್ಲ.

# ಪುಷ್ಪಮಾಲಾರವರ ಕಲೆ

—ಕೆ. ಎಸ್. ಶ್ರೀನಿವಾಸಮೂರ್ತಿ

ಪುಷ್ಪಮಾಲರವರ ಈವರೆಗಿನ ಕೆಲವು ಪ್ರಾತಿನಿಧಿಕ ಕೃತಿಗಳನ್ನು ಗಮನದಲ್ಲಿಟ್ಟು ಕೊಂಡು, ಅವುಗಳ ಮುಖ್ಯ ಕಾಳಜಿ, ಬದಲಾವಣೆಗಳನ್ನು ಈ ಲೇಖನದಲ್ಲಿ ಗುರುತಿಸು ವುದು ನನ್ನ ಪ್ರಯತ್ನ. ತಮ್ಮ ಎಂ.ಎ ಪದವಿಯ ಭಾಗಶಃ ಪೂರೈಕೆಗಾಗಿ ಬರೆದ ಪ್ರಬಂಧದಲ್ಲಿ ಪುಷ್ಪಮಾಲರವರೆ "Humour is the central point of my Perception of the world" ಎಂದು ಹೇಳಿಕೊಂಡಿರುವ ಮಾತನ್ನು ಹಾಗು ಈಗಾಗಲೆ ಹಲವು ಪತ್ರಿಕಾ ಲೇಖನಗಳು, ಸಂದರ್ಶನಗಳು ಅವರ ಕೃತಿಗಳಲ್ಲಿ ಕಾಣುವ ಹಾಸ್ಯ, ವಿಡಂಬನೆಗಳಿಗೆ ನೀಡಿರುವ ಪ್ರಾಮುಖ್ಯತೆಯನ್ನು ಸಮರ್ಥಿಸಿ

---

1956ರಲ್ಲಿ ಬೆಂಗಳೂರಿನಲ್ಲಿ ಜನಿಸಿದ ಪುಷ್ಪಮಾಲಾರವರು ಶಿಲ್ಪಕಲೆಯ ವ್ಯಾಸಂಗ ಕ್ಕಾಗಿ ಬರೋಡದ ಎಂ.ಎಸ್. ವಿಶ್ವವಿದ್ಯಾಲಯದ ಬಿ.ಎ. (ಫೈನ್ ಆರ್ಟ್ಸ್) ಪದವಿಗೆ 1978ರಲ್ಲಿ ಸೇರಿದರು. 1982ರಲ್ಲಿ ಈ ಪದವಿಯನ್ನು ಪಡೆದು ಬೆಂಗಳೂರಿಗೆ ಹಿಂದಿರು ಗಿದ ಅವರು ಸುಡಾವೆ-ಮಣ್ಣಿನಲ್ಲಿ ಶಿಲ್ಪಕಲೆಗೆ ತೊಡಗಿ, ಮತ್ತೆ 1983 ರಿಂದ 1985ರವರೆಗೆ ಅದೇ ವಿಶ್ವವಿದ್ಯಾಲಯದಲ್ಲಿ ಶಿಲ್ಪಕಲಾಭ್ಯಾಸಕ್ಕೆಂದು ಶ್ರೀ ರಾಘವೇಂದ್ರ ಕನೆರಿಯವರ ನೇತೃತ್ವದಲ್ಲಿ ಎಂ.ಎ. ವ್ಯಾಸಂಗಕ್ಕೆ ತೊಡಗಿದರು. ತಮ್ಮ ವ್ಯಾಸಂಗ ದುದ್ದಕ್ಕೂ ಕರ್ನಾಟಕ ಸರ್ಕಾರದ ಸ್ಕಾಲರ್‌ಶಿಪ್ ಪಡೆದ ಅವರು 1984ರ ರಾಷ್ಟ್ರ ಪ್ರಶಸ್ತಿಯನ್ನು, 1986ರ ಆರನೆಯ ಟ್ರಿನಾಲೆಯ ಪ್ರಶಸ್ತಿಯನ್ನು ಗಳಿಸಿದರು. ರಾಜ್ಯ ಮತ್ತು ಕೇಂದ್ರ ಅಕಾಡೆಮಿಗಳ ಹಲವು ಪ್ರದರ್ಶನಗಳಲ್ಲಿ ಇವರ ಶಿಲ್ಪಗಳು ಮರಚ್ಚುಗಳು (wood-cut prints) ಸೇರಿದ್ದು 1983ರಲ್ಲಿ ಈಕೆಯು ಬೆಂಗಳೂರಿನಲ್ಲಿ ಏಕವ್ಯಕ್ತಿ ಪ್ರದರ್ಶನವೊಂದನ್ನು ನಡೆಸಿದರು. ಕಲೆಯ ಬಗ್ಗೆ ಗಂಭೀರವಾಗಿ ಯೋಚಿಸುವ ಶ್ರೀನಿವಾಸಮೂರ್ತಿಯವರು ಪುಷ್ಪಮಾಲರವರ ಬಗ್ಗೆ ಲೇಖನ ಬರೆದುಕೊಟ್ಟಿದ್ದಾರೆ. ಪತ್ರಿಕೆ ಅವರಿಗೆ ಋಣಿಯಾಗಿದೆ.

ಸಂ—

---

ನಂ. 397, 41ನೇ ಕ್ರಾಸ್ 8ನೇ ಬ್ಲಾಕ್ ಜಯನಗರ ಬೆಂಗಳೂರು-560082

ಕೊಳ್ಳುವುದು ಕಷ್ಟವೇನಿಲ್ಲ. ಆದರೆ 1982ರ ಅವರ ಮುರಚ್ಚುಗಳಲ್ಲಿಯಾಗಲಿ, ನಂತರದ ಮಹತ್ವದ ಕೃತಿಗಳೆನ್ನಬಹುದಾದ 'ಹೆಣ್ಣುನಾಯಿ' ಮತ್ತು 'ಹಂದಿಗಳಂತಹ ಶಿಲ್ಪಗಳಲ್ಲಾಗಲಿ ಹಾಸ್ಯ, ವಿಡಂಬನೆಗಳು ಗೌಣ ಅಥವ ಇಲ್ಲವೆ ಇಲ್ಲವಾಗಿರುವುದನ್ನು ಗಮನಕ್ಕೆ ತರುವುದೂ ನನ್ನ ಇಲ್ಲಿನ ಮತ್ತೊಂದು ಉದ್ದೇಶ. ಪುಷ್ಪಮಾಲರವರೆ ಸ್ವತಃ ತಮ್ಮ ಕಲೆಯ ಬೆಳವಣಿಗೆ, ಗೊತ್ತುಗುರಿಗಳನ್ನು ಮೇಲೆ ಹೇಳಿದ ಪ್ರಬಂಧದಲ್ಲಿ ವಿಶ್ಲೇಷಿಸಿರುವುದು ಮತ್ತು ಇತ್ತೀಚೆಗೆ ಅವರೊಂದಿಗೆ ನಡೆಸಿದ ನನ್ನ ಸಂದರ್ಶನ–ಇವುಗಳ ಹಿನ್ನೆಲೆಯು ಈ ಲೇಖನಕ್ಕಿದೆ.

ಯಾವುದೇ ಕಲಾಕೃತಿಯನ್ನು ಅರ್ಥಮಾಡಿಕೊಳ್ಳಲು ಆಯಾ ಕಲಾವಿದ/ಕಲಾವಿದೆಯ ವೈಯುಕ್ತಿಕ ಜೀವನ, ಪರಿಸರಗಳೂ ಅರ್ಥಪೂರ್ಣವಾಗಬಲ್ಲುವೆಂಬುದಕ್ಕೆ ಪುಷ್ಪಮಾಲರವರೊಂದು ನಿದರ್ಶನ. ಮನೆಯ ವಾತಾವರಣದಲ್ಲಿ ಅವರು ಕಂಡ theatrical ಮತ್ತು melodramatic ಸಂದರ್ಭಗಳು, ವ್ಯಕ್ತಿಗಳು, ನಗರ ಜೀವನದಲ್ಲಿ ಅವರು ಅನುಭವಿಸಿದ ಪ್ರೀತಿ-ದ್ವೇಷಗಳ ದ್ವಂದ್ವಗಳು, ಅಂಗಡಿ, ಬಸ್, ರಸ್ತೆಗಳಲ್ಲೆಲ್ಲ ರಾರಾಜಿಸುವ ಸ್ತ್ರೀ ಪುರುಷರ ಒಳಂಗಿಗಳ ಜಾಹಿರಾತುಗಳ ವಿಚಿತ್ರ ಆಕರ್ಷಣೆ ಇವೆಲ್ಲದರ ಜೊತೆಗೆ ಭಾರತೀಯ ಮಹಿಳೆಯರ, ಕ್ರಿ.ಶ. ಒಂದನೆಯ ಶತಮಾನದ ಸಾಂಚಿಯ ಯಕ್ಷಿಯರಂತಹ ದುಂಡಗಿನ ಶರೀರ–ಈ ಎಲ್ಲ ವೈಯುಕ್ತಿಕ ನೋಟ ಅರಿವುಗಳು ಪುಷ್ಪಮಾಲರವರ ಕಲೆಯ ವ್ಯಾಪ್ತಿ, ಗೊತ್ತುಗುರಿಗಳಿಗೆ ಒಂದು ನಿರ್ದಿಷ್ಟ ಚೌಕಟ್ಟನ್ನು ಒದಗಿಸಿವೆ. ನಿತ್ಯಜೀವನದ ಸಾಮಾನ್ಯ ಜನ, ಘಟನೆಗಳು ಎಷ್ಟೇ ಅಪ್ರಾಮುಖ್ಯಮಾನ ಎನಿಸಿವರೂ ಅಥವ ಕೆಲವೊಮ್ಮೆ ಕೃತಕತೆಯ ಕಾರಣದಿಂದ ಅಸಹನೀಯವಾದರೂ, ಇವಾವುದರ ವೈಭವೀಕರಣವಾಗಲಿ, ನೇರವಾದ ಹೀಗಳಿಕೆಯಾಗಲಿ ಅವರ ಸರಳವಾದ ಕೃತಿಗಳ ಸಂಕೀರ್ಣ ಅನುಭವಕ್ಕೆ ಹೊರತಾದುವೆ. ಈ ಕಾರಣದಿಂದಲೆ 'ಭಾರತೀಯತೆ' ಎಂಬುದೂ ಸಹ ಭವ್ಯವಾದ ಬೂತವೊಂದರ ಪುನರುತ್ಥಾನ ಎಂದಾಗದೆ ಸಧ್ಯದ ವರ್ತಮಾನದ ಪರಿಶೋಧನೆಯೆ ಎನಿಸಿ ಇವರ ಕೃತಿಗಳಲ್ಲಿ ಪ್ರಬಲವಾಗಿದೆ. ಹಾಗೆಂದು 'ಸಮಕಾಲೀನತೆ' ಎಂಬುದು ಯಾವುದೆ ನಿರ್ದಿಷ್ಟ ವಿಷಯಕ್ಕೆಷ್ಟೆ-ಉದಾಹರಣೆಗೆ ಭೂಪಾಲ್ ದುರಂತ–ಬದ್ಧವಾಗಿರಬೇಕೆಂಬುದನ್ನು ಪುಷ್ಪಮಾಲರವರು ಒಪ್ಪುವುದಿಲ್ಲ. ಈ ನಂಬಿಕೆಗನುಗುಣವಾಗಿ ಉದ್ದಕ್ಕೂ ಪುಷ್ಪಮಾಲರವರ ಕೃತಿಗಳಲ್ಲಿ ಯಾವುದೆ ನಿರ್ದಿಷ್ಟ ವ್ಯಕ್ತಿಯಾಗಲಿ, ಘಟನೆಯಾಗಲಿ ನಮಗೆ ಗುರುತಿಸಲು ಕಾಣಸಿಗುವುದಿಲ್ಲ. ಪುಷ್ಪಮಾಲರವರ ಕೃತಿಗಳ ಹಿಂದಿನ ಪ್ರೇರಣೆಗಳಾದ ವ್ಯಂಗ್ಯ ವಿಡಂಬನೆಗಳಿಗೆ ಒಂದು ಸ್ಪಷ್ಟ ರೂಪವನ್ನು ನೀಡಿದ ಖ್ಯಾತ ಕಲಾವಿದರಾದ ಶ್ರೀ ಕೆ. ಜಿ. ಸುಬ್ರಹ್ಮಣ್ಯಂರವರ ಪಾತ್ರವು ಇಲ್ಲಿ ಮಹತ್ವಪೂರ್ಣವಾದದ್ದು. 'ಕಲೆ' ಎಂಬುದೊಂದು ಗಂಭೀರ ವಿಧಿಯೆ ಆಗಬೇಕಿಲ್ಲ ಎಂದೂ ಅದು ಹಾಸ್ಯ, ಲೇವಡಿಗಳಲ್ಲಿ ತೊಡಗಿಯೂ

ತನ್ನ ಮಹತ್ವವನ್ನು ಉಳಿಸಿಕೊಳ್ಳಬಲ್ಲುದೆಂಬುದನ್ನು ಕೆ. ಜಿ. ಸುಬ್ರಹ್ಮಣ್ಯಂರವರ ಗ್ಲಾಸ್‌ಪೇಂಟಿಂಗ್‌ಗಳಲ್ಲಿನ ದೈನಂದಿನ ವಿಷಯಗಳು, ಜನಪ್ರಿಯ ರೂಪಗಳು ಪುಷ್ಪ ಮಾಲಾರವರಿಗೆ ಮನದಟ್ಟು ಮಾಡಿದುವು.

ಇವಿಷ್ಟು ಸೂಕ್ಷ್ಮವಾಗಿ ಪುಷ್ಪಮಾಲಾರವರ ವೈಯಕ್ತಿಕ ಒಲವು–ನಿಲುವು ಮತ್ತು ಅನುಭವವ್ಯಾಪ್ತಿಗಳನ್ನು ಕುರಿತ ಸಾಮಾನ್ಯೀಕರಣಗಳಾದರೆ, ಅವರ ಕೆಲವು ಪ್ರಾತಿನಿಧಿಕ ಕೃತಿಗಳಲ್ಲಿ ಇವು ಹೇಗೆ ರೂಪತಾಳಿವೆ ಮತ್ತು ಎಷ್ಟರ ಮಟ್ಟಿಗೆ ಯಶಸ್ವಿಯಾಗಿ ನಮ್ಮನ್ನು ತಟ್ಟುತ್ತವೆ ಎಂಬುದನ್ನು ಇನ್ನು ಮುಂದೆ ಗಮನಿಸಬಹುದು. ಪುಷ್ಪಮಾಲ ರವರ ಈವರೆಗಿನ ಪ್ರಾತಿನಿಧಿಕ ಕೃತಿಗಳನ್ನು ಸ್ಥೂಲವಾಗಿ ನಾಲ್ಕು ಹಂತಗಳಲ್ಲಿ ಅಭ್ಯಸಿ ಸುವ ಸಾಧ್ಯತೆಯಿದೆ. 1979–80ರ, ವೈಚಾರಿಕತೆ, ಭಾವೋದ್ವೇಗಗಳೆರಡಕ್ಕೂ ಒಲಿದ ಪ್ರಾಯೋಗಿಕತೆ, 1981ರ nostalgia, 1982ರ ಯೌವನ–ಉತ್ಸಾಹ ಮತ್ತು 1983 ರಿಂದೀಚಿನ ತೀವ್ರ ಅಭಿವ್ಯಕ್ತಿ ಮತ್ತು ಭಾವನಿಯಂತ್ರಣಗಳಿಗೊಗ್ಗಿದ ಸಮನ್ವಯತೆ, ಹೀಗೆ.

ಆದರೆ, ಈ ಮೇಲಿನ ಯಾವುದೆ ನಿರ್ದಿಷ್ಟ ಮಾನಸಿಕ ಧೋರಣೆಯೂ ಯಾವುದೆ ಒಂದು ನಿರ್ದಿಷ್ಟ ಅವಧಿಗಷ್ಟೇ ಸೀಮಿತವೆನ್ನುವ ಸರಳೀಕರಣವು ಅರ್ಥ ಹೀನವಾಗುತ್ತದೆ ಎಂಬುದನ್ನೂ, ಈ ವರ್ಗೀಕರಣವನ್ನು ಕೇವಲ ಈ ಲೇಖನದ ಅನುಕೂಲಕ್ಕಾಗಿಯಷ್ಟೇ ಮಾಡಲಾಗಿದೆ ಎಂಬುದನ್ನೂ ಮರೆಯುವಂತಿಲ್ಲ. ಉದಾ ಹರಣೆಗೆ ಪುಷ್ಪಮಾಲಾರವರ ಕಲಾವಿಕಾಸದ ಎಲ್ಲ ಹಂತಗಳಲ್ಲೂ ಅವರ ವೈಯಕ್ತಿಕ ಸಾಮಾಜಿಕ ಅನುಭವಗಳೊಂದಿಗಿನ ತನ್ಮಯತೆಯೊಂದಿಗೆ ನಿಸ್ಸಂಗ ಪರಿಭಾವಕತ್ವವನ್ನೂ ನಾವು ಕಾಣಬಹುದ. ಅದರಿಂದ ಅವರ ಹಳೆಯ ನೆನಪುಗಳ ವಿಶೇಷ ಆಕರ್ಷಣೆಯು ಭಾವಾತಿರೇಕಕ್ಕೊಳಗಾಗದೆ ಯಶಸ್ವಿಯಾದ ಕಲಾಕೃತಿಗಳಾಗುತ್ತವೆ. ಪ್ರಾಯೋಗಿ ಕತೆಯಂತು ಅವರ ಕಲೆಯ ವಿಶಿಷ್ಟ ಲಕ್ಷಣವಾಗಿ ಎಲ್ಲ ಹಂತಗಳಲ್ಲೂ ಗಮನ ಸೆಳೆಯು ತ್ತದೆ.

## 1979-80 ರ ಪ್ರಾಯೋಗಿಕ ಹಂತ :

ಯಾವುದೆ ನಿರ್ದಿಷ್ಟ ಮಾಧ್ಯಮ, ವಸ್ತುರೂಪಗಳಿಗೆ ಈ ಅವಧಿಯ ಕೃತಿಗಳು ಬದ್ಧವಾಗದೆ ಇವೆಲ್ಲದರ ವೈವಿಧ್ಯತೆಯಲ್ಲಿ ತೋರಿರುವ ಒಲವಿನ ಕಾರಣದಿಂದ ಈ ಹಂತವನ್ನು 'ಪ್ರಾಯೋಗಿಕ' ಎನ್ನಬಹುದು. ಇಲ್ಲಿಯ ನಿದರ್ಶನಗಳಲ್ಲಿ ಭಾವೋದ್ವೇಗ ವೈಚಾರಿಕತೆಗಳೊಂದಿಗೆ ಪ್ರತಿಕೃತಿಸಹಿತ (Represenfational) ಮತ್ತು (non-represen tational) ಲಕ್ಷಣಗಳನ್ನೂ ಕಾಣಬಹುದು. ರುಬ್ಬು ಕಾಗದದಿಂದ

(Papier-mache) ರಚಿಸಿರುವ 'ವೀನಸ್' ಪ್ರತಿಕೃತಿರಹಿತ ಶಿಲ್ಪವು ಈ ಹಂತದ್ದು. ಇಲ್ಲಿಯ ಪ್ರೇರಣೆಯು ನೇರವಾಗಿಯೋ, ಪರೋಕ್ಷವಾಗಿಯೋ, ಪಾಶ್ಚಾತ್ಯ, ಹಳೆ ಶಿಲಾಯುಗದ 'ವೀನಸ್'ಗಳಂತಹ ಶಿಲ್ಪಗಳನ್ನೂ, ಆಧುನಿಕ ಯುಗದ ದುಂಡುಶರೀರದ ಮಹಿಳೆಯರನ್ನೂ ಒಳಗೊಂಡಿದೆ. ಬಟ್ಟೆಗಳನ್ನು ಒಣಹಾಕುವ ಹ್ಯಾಂಗರ್‌ನ ಮೇಲೆ ಬ್ರಾವೊಂದನ್ನು ನೇತುಹಾಕಿ ಅದರ ಎರಡೂ ಪಕ್ಕದಲ್ಲಿ ರುಬ್ಬು ಕಾಗದದಿಂದ ದುಂಡಾಕಾರದ ಪುಷ್ಟವಾದ ತೋಳು ತೊಡೆಗಳನ್ನು ರಚಿಸಿರುವ ಇಲ್ಲಿಯ ತಂತ್ರವು, ಸೈಕಲ್ ಹಿಡಿಯ ಮಧ್ಯಭಾಗದಲ್ಲಿ ಅರ್ಧ ಆಸನವನ್ನು ಹೊಂದಿಸಿ ಪಿಕಾಸೋ ಸೃಷ್ಟಿಸಿದ 'ಗೂಳಿಯ ಶಿರ'ವನ್ನು ನೆನಪಿಗೆ ತರುತ್ತದೆ.

"ವೀನಸ್" ಕೃತಿಯಲ್ಲಿ, ನನ್ನ ಮಟ್ಟಿಗೆ ಹಾಸ್ಯ-ವ್ಯಂಗ್ಯಗಳ ಪಾತ್ರವು ಗೌಣವೆ ಸರಿ. ಈ ಶಿಲ್ಪದ ತೀವ್ರವಾದ ಸಮಪ್ರಮಾಣ, ಅಚಲತೆಗಳೆ ಅಲ್ಲದೆ ಇಲ್ಲಿ ಆಯ್ಕೆಯಾಗಿರುವ 'ಮಾತೃತ್ವ' ಅಥವ 'ಮಾತೃದೇವತೆ'ಯಂತಹ ವಿಷಯದ ನಿರೂಪಣೆಗೆ ಸೂಕ್ತವಾದ ಸಮಪ್ರಮಾಣದ ಗಾಂಭೀರ್ಯದ ಪ್ರಾಬಲ್ಯವು ಇಲ್ಲಿ ನಮ್ಮ ಗಮನ ಸೆಳೆಯುವುದು. ಇದಕ್ಕೆ ಕಾರಣವೆನ್ನಬಹುದು. ಇದರಿಂದ ಆಧುನಿಕ ಜೀವನವನ್ನು ಸಂಕೇತಿಸುವ ಇಲ್ಲಿನ ಬ್ರಾ ವ್ಯಂಗ್ಯ, ವಿಡಂಬನೆಗಳನ್ನು ಸೃಷ್ಟಿಸುವುದರಲ್ಲಿ ನೆರವಾಗಿಲ್ಲ. ಅಥವ ಇದನ್ನು ಈ ರೀತಿ ಹೇಳಬಹುದು—ಪುಷ್ಪಮಾಲರವರ ಮುಂದಿನ ವಿಕಾಸವನ್ನು ದೃಷ್ಟಿಯಲ್ಲಿಟ್ಟುಕೊಂಡು ಗಮನಿಸಬಹುದಾದ ಒಂದು ಅಂಶವೆಂದರೆ, 1979ರ ಅವರ ನಿಲುವು ಧೋರಣೆಗಳು ಅಸ್ಪಷ್ಟರೂಪದವು. 'ವೀನಸ್' ಕೃತಿಯಲ್ಲಿ ನಿರ್ದಿಷ್ಟ ವಿಷಯವೊಂದರ ದ್ವಂದ್ವವಿರುವಂತೆಯೆ 1979ರ ಇನ್ನೆರಡು ಪ್ರಾತಿನಿಧಿಕ ಕೃತಿಗಳಲ್ಲಿ ಇವುಗಳಿಗೆ "ಶೋಷಣೆ" ಮತ್ತು "ಬಂಧನ" ಎಂದು ಈ ವಿಶ್ಲೇಷಣೆಯ ಅನುಕೂಲಕ್ಕಾಗಿ ಕರೆಯಬಹುದು—ಮಾಧ್ಯಮ ವೈವಿಧ್ಯತೆಯ ವಿಭಿನ್ನತೆಯುಂಟು. "ಶೋಷಣೆ" ಎಂದು ಹೆಸರಿಸಬಹುದಾದ ಪ್ಲಾಸ್ಟರ್ ಆಫ್ ಪ್ಯಾರಿಸ್‌ನ ಶಿಲ್ಪದಲ್ಲಿ ನಾವು ಕಾಣುವುದು ಈ ಅವಧಿಯ ಪ್ರತಿಕೃತಿಗಳ ಗುಂಪಿನ ನಡುವೆ ಪ್ರತ್ಯೇಕವಾಗಿ ವಿಭಿನ್ನವಾಗಿ ಕಾಣುವ ಯಥಾರ್ಥ ಚಿತ್ರಣ. ಭ್ರೂಣವೊಂದರ ಭಂಗಿಯಲ್ಲಿ ಕೈಕಾಲುಗಳನ್ನು ಅಥವ ಇಡೀ ಶರೀರವನ್ನು ಸುರಳಿಸುತ್ತಿ ಮಲಗಿರುವ ಇಲ್ಲಿನ ನಗ್ನ ಸ್ತ್ರೀಯೊಬ್ಬಳ ಆಕೃತಿಯನ್ನು ತೆರೆದ ಪೆಟ್ಟಿಗೆಯೊಂದರಲ್ಲಿ ಒಣಹುಲ್ಲುಗಳ ನಡುವೆ ಒಂದು ಮಾರಾಟದ ವಸ್ತುವಿನಂತೆ ತೋರುವುದರ ಮೂಲಕ ಈ ಕೃತಿಯು ಸ್ತ್ರೀಶೋಷಣೆಯನ್ನು ಚಿತ್ರಿಸುತ್ತದೆ.

ಇದೇ ಅವಧಿಯ "ಬಂಧನ" ಎಂದು ಕರೆಯಬಹುದಾದ ಕೃತಿಯು ಪೆಟ್ಟಿಗೆಯೊಂದರಲ್ಲಿ ಬಂಧಿಯಾದ ವ್ಯಕ್ತಿಯು ಇಲ್ಲಿಂದ ಪಾರಾಗಲು ಪ್ರಯತ್ನಿಸುತ್ತಿರುವುದರ ನಿರೂಪಣೆಯಾಗಿದೆ. ಈ ವ್ಯಕ್ತಿಯ ಮೊಣಕೈ, ಹಿಮ್ಮಡಿ, ಕಾಲ್ಬೆರಳುಗಳು ಮಾತ್ರ

ಪೆಟ್ಟಿಗೆಯ ಮೂಲೆಗಳಿಂದ ಹೊರಕಾಣುವಂತಿದ್ದು, ನಮ್ಮ ನೋಟದ ಸಮಗ್ರತೆಗೆ ಪೆಟ್ಟಿಗೆಯ ಅಚಲ ಅಸ್ತಿತ್ವವೆ ಪ್ರಬಲವಾಗಿ, ಆದರೊಳಗಣ ವ್ಯಕ್ತಿಯ ತಲ್ಲಣ, ತಳಮಳಗಳು ನಮ್ಮನ್ನು ಪರಿಣಾಮಕಾರಿಯಾಗಿ ತಟ್ಟುವುದು ಸಾಧ್ಯವಾದಂತೆನಿಸು ವುದಿಲ್ಲ.

ಆದರೆ, ಈ ಮೇಲಿನ ನಿದರ್ಶನಗಳಲ್ಲಿ ಸ್ಪಷ್ಟವಾಗಿ ಕಾಣದ ವಿಡಂಬನಾತ್ಮಕ ಧೋರಣೆಯು ಇದೆ ಅವಧಿಯ ರುಬ್ಬುಕಾಗದದ ಸ್ತ್ರೀಯರ ರುಂಡಗಳ ಗುಂಪಿನ ಶಿಲ್ಪದಲ್ಲಿ ನಾವು ಗುರುತಿಸಬಹುದು. ಈ ರುಂಡಗಳಿಗೆ ಮಕ್ಕಳಾಟಿಕೆಯ, ಕಪ್ಪು ಪ್ಲಾಸ್ಟಿಕ್ ಕನ್ನಡಕಗಳನ್ನು ಹಾಕಿ, ದಪ್ಪ ಕತ್ತು, ಸೆಟೆದ ತಲೆ, ಭಾವನಾ ರಹಿತವಾದ ಮುಖ, ಬಿಗಿದ ತುಟಿ ಇಂತಹ ಲಕ್ಷಣಗಳಿಂದ ಇಲ್ಲಿ ಲೇಡಿಸ್ ಕ್ಲಬ್ ಸದಸ್ಯರ ಆತ್ಮ ಪ್ರತಿಷ್ಟೆ, ದರ್ಪ ಮುಂತಾದುವುಗಳ ಲೇವಡಿಯನ್ನು ಸಾಕಷ್ಟು ಪರಿಣಾಮಕಾರಿಯಾಗಿ ಈ ಕಲಾವಿದೆಯು ಸಾಧಿಸಿದ್ದಾರೆನ್ನಬಹುದು. ಈ ಕೃತಿಯ ಅತಿಶಯತೆಗಳು ವ್ಯಂಗ್ಯ ಚಿತ್ರಕ್ಕೆ ತೀರ ಹತ್ತಿರವಾಗಿವೆಯೆಂದರೆ ತಪ್ಪಾಗದು. ಇಲ್ಲಿಯ ಚಿತ್ರಣವು ಪ್ರತಿಕೃತಿ ರಹಿತವೆ ಆದರೂ ಆಕೃತಿಯ ಮೇಲ್ಮೈಯ ಏರುತಗ್ಗುಗಳನ್ನು ಅರ್ಥಾತ್ ತ್ರಿಮಾನ ಮಾನ್ನು ಯಥಾರ್ಥತೆಗೆ ಹತ್ತಿರವಾಗಿ ತೋರಿರುವ ಪ್ರಯತ್ನವು ಇಲ್ಲಿದೆ. 1980 ಪುಷ್ಪಮಾಲರವರು ಶಿಲ್ಪ ಕಲೆಯಲ್ಲಿ ವಿಶೇಷಾಭ್ಯಾಸಕ್ಕೆ ಪ್ರಾರಂಭಿಸಿದ ಪ್ರಥಮ ವರ್ಷ. ಕಲ್ಪನೆ ಭಾವೋದ್ವೇಗಗಳ 1979ರಿಂದ, 1980ರ ತೀಕ್ಷ್ಣ ಸಂವಹನದತ್ತ ಹೊರಳಿದ ವಿಕಾಸದ ಹಿನ್ನೆಲೆಯಲ್ಲಿ ಪ್ರತಿಕೃತಿರಾಹಿತ್ಯದಿಂದ ಯಥಾರ್ಥತೆಗೆ ಪರಿವ ರ್ತನೆ ಹೊಂದಿದ ಸಹಜವಾದ ಮನೋಧರ್ಮವೊಂದನ್ನು ಕಾಣಬಹುದು. ಆದರೆ 1979ರ 'ವೀನಸ್' ಕೃತಿಯೂ ಯಥಾರ್ಥತೆಯನ್ನು ಗುರುತಿಸಲಾಗದ ರೀತಿಯಲ್ಲಿ ವಿರೂಪಗೊಳಿಸುವುದಿಲ್ಲ. ಹಾಗಿದ್ದಲ್ಲಿ 1980ರಲ್ಲಿ ಕಾಣುವ ಬೆಳವಣಿಗೆಯಾದರೂ ಏನು ? 1980ರಲ್ಲಿ ಅಮೂರ್ತ ರೂಪ, ವಿಚಾರಗಳಿಗಿಂತ ತನ್ನ ಸುತ್ತ ಮಿಸುಕಾ ಡುವ ಬದುಕಿಗೆ ನೇರವಾಗಿ ಸ್ಪಂದಿಸುವ, —ಈ ಮುಂಚೆ ಅಸ್ಪಷ್ಟವಾದ ಆಕಾಂಕ್ಷೆ ಗಳು ಈಗ ಇನ್ನೂ ಸ್ಪಷ್ಟವಾಗುತ್ತವೆ. ಸುಡಾವೆ ಮಣ್ಣಿನಿಂದ ರಚಿಸಿದ ಪುರುಷನ ಒಳ ವಸ್ತ್ರಗಳ ಒಂದು ಕೃತಿಯನ್ನು ಇಲ್ಲಿ ನಿದರ್ಶಿಸಬಹುದು. ಇಲ್ಲಿ ಯಾವ ಮಾನವಾ ಕೃತಿಯನ್ನೂ ತೋರದೆ, ಕೇವಲ ಬನಿಯನ್ ಮತ್ತು ಖಾಕಿ ನಿಕ್ಕರುಗಳನ್ನು ಅವುಗಳ ಮೇಲ್ಮೈಯ ಮಡಿಕೆ, ಉಬ್ಬು ತಗ್ಗುಗಳು, ಮುಂತಾದುವುಗಳ ಮೂಲಕ ದೊಡ್ಡ ಹೊಟ್ಟೆಯ ಮಧ್ಯ ವಯಸ್ಕನೊಬ್ಬನನ್ನು ನಿರೂಪಿಸುವ ಪ್ರಯತ್ನವಿದೆ. 'ವೀನಸ್' ಕೃತಿಯಲ್ಲಿ 'ಬ್ರಾ' ಒಂದರ ಸೇರ್ಪಡೆಯಿದ್ದೂ ಸಹ ಯಥಾರ್ಥತೆಯ, ಸಹಜತೆಯ ಸೂಚನೆಗಳಿಗಿಂತ ಇವುಗಳಿಂದ ವಿಮುಖವಾದ ವಿಚಾರಗಳೆ ಪ್ರಬಲವಾ ಗಿರುವುದನ್ನು ಈಗಾಗಲೆ ಸ್ಪಷ್ಟವಾಗಿ ಕಂಡಿದ್ದೇವೆ. ಆದರೆ 1980ರ ಈ ಪುರುಷನ

ಒಳವಸ್ತುಗಳಿಂದ ಧ್ವನಿತವಾಗುವ ಅರ್ಥವೆ ವಿಭಿನ್ನ ರೀತಿಯದು. ಇಲ್ಲಿ ಒಂದು ನಿರ್ದಿಷ್ಟ ಪ್ರಾಯ, ನಿರ್ದಿಷ್ಟ ಸಾಮಾಜಿಕ ಮತ್ತು ಆರ್ಥಿಕ ಮಟ್ಟ ಮುಂತಾದುವುಗಳ ಚೌಕಟ್ಟೊಂದನ್ನು ನಿರ್ಮಿಸಬಲ್ಲ ಯಥಾರ್ಥ ಚಿತ್ರಣವುಂಟು.

## 1981 ರ ನಾಸ್ಟಲಿಜಿಕ್ ಹಂತ

1981ರಲ್ಲಿ ತಾಯಿಯನ್ನು ಕಳೆದುಕೊಂಡ ಪುಷ್ಪಮಾಲವರನ್ನು ಚಿಕ್ಕಂದಿನ ನೆನಪುಗಳು, ಹಳೆಯ ಫೋಟೋಗಳು ಮುಂತಾದುವು ವಿಶೇಷವಾಗಿ ಕಾಡಿದುವು. ಈ ಅವಧಿಯ ಮುಖ್ಯ ಕೃತಿಗಳೆಂದರೆ ಪ್ಲಾಸ್ಟರ್‌ನಿಂದ ರಚಿಸಿದ ಸ್ತ್ರೀಯರ ಭಾವಚಿತ್ರಗಳು ಇವು ಯಾವುದೇ ನಿರ್ದಿಷ್ಟ ವ್ಯಕ್ತಿಯನ್ನು ಕುರಿತದಲ್ಲ. ಇಲ್ಲಿ ಸ್ತ್ರೀಯನ್ನು ಆತ್ಮಬಲಿಯ ಪ್ರತೀಕ ಅಥವ ಶೋಷಣೆಗೊಳಗಾದ ಯಜ್ಞಪಶುವಿನಂತೆ ಕಾಣುವ ಬದಲಾಗಿ ಮನೋಸ್ಥೈರ್ಯವುಳ್ಳ ಎಂಟೆದೆಯ ಹೆಣ್ಣಿನಂತೆ ಅರ್ಥೈಸುವ ಪ್ರಯತ್ನವಿದೆ. ಆದರೆ 'ಬ್ರಾ ಧರಿಸುತ್ತಿರುವ ಮಹಿಳೆ' ಕೃತಿಯನ್ನು ನಿದರ್ಶಿಸುವುದಾದರೆ, ಇಲ್ಲಿ ಫೋಟೋಗ್ರಫಿಯ ಭಂಗಿಯೊಂದರ ಅನುಭವವಾಗಿ. ಈ ಮಹಿಳೆಯು ಸಹಜವಾದ ಚಟುವಟಿಕೆಯೊಂದರಲ್ಲಿ ಮಗ್ನಳಾದಂತಾಗಲಿ, ಸ್ಪಷ್ಟವಾದ ಪ್ರತಿಕ್ರಿಯೆಗೆ ಕಾರಣವಾಗಬಲ್ಲ ಚಲನಶೀಲತೆಯಿಂದ ಕೂಡಿರುವಂತಾಗಲಿ ಎನಿಸುವುದಿಲ್ಲ. ಹೀಗಿದ್ದೂ ಈ ಕೃತಿಗೆ ತನ್ನದೆ ಪ್ರಾಮುಖ್ಯತೆಯುಂಟು. ಬಸ್‌ಗಳು ಕೆಳಮಟ್ಟದ ಅಭಿರುಚಿಯ ಕ್ಯಾಲೆಂಡರುಗಳು ಮುಂತಾದುವುಗಳು ಕಾಣಬಹುದಾದ ಜಾಹಿರಾತುಗಳು, ಭಾರತೀಯ ಪರಂಪರೆಯ ದುಂಡುಗಿನ ಕೈ ಕಾಲುಗಳ ಯಕ್ಷಿಯರು—ಈ ಬಗೆಯ ಪ್ರಭಾವ—ಪ್ರೇರಣೆಗಳಿಂದ ಈ ಕೃತಿಯು ಪ್ರಾಮಾಣಿಕ ಅಭಿವ್ಯಕ್ತಿ ಮತ್ತು ಅಧಿಕೃತತೆಗಳನ್ನು ಗಳಿಸುತ್ತದೆ. ಈ ಹೆಣ್ಣಿನಲ್ಲಿ ಆತ್ಮವಿಶ್ವಾಸ, ತುಂಟತನಗಳಿಂದ ಕೂಡಿದ ಸ್ವತಂತ್ರ ಮನೋವೃತ್ತಿಯನ್ನು ಮಾತ್ರ ಒಂದು ಸೀಮಿತ ಅರ್ಥದಲ್ಲಷ್ಟೇ ನಾವು ಕಾಣುವುದು ಸಾಧ್ಯ.

## 1982ರ ಯೌವನೋತ್ಸಾಹದ ಹಂತ

1982ರ ಪುಷ್ಪಮಾಲರ ಜೀವನ ದೃಷ್ಟಿಗೇ ಒಂದು ಹೊಸ ಆಯಾಮ ನೀಡಿ, ಅವರ ವೃತ್ತಿಯ ಒಂದು ಮುಖ್ಯ ಮೈಲಿಗಲ್ಲಾದ ವರ್ಷವಾಗಿ ಕಂಡುಬರುತ್ತದೆ. ಈ ಅವಧಿಯಲ್ಲಿಯೂ ಹೊಸ ಮಾಧ್ಯಮಗಳನ್ನು ಶೋಧಿಸುವ ಪ್ರಯೋಗ ಶೀಲತೆಯೊಂದಿಗೇ ಈವರೆಗೆ ಪ್ರಬಲವಾಗಿದ್ದ ಹಾಸ್ಯ ಕುಹಕಗಳು ಈಗ ಬದುಕಿನ ಇನ್ನೊಂದು ಮುಖವಾದ ಸ್ನೇಹ, ಪ್ರೀತಿ, ಯೌವನ, ಉತ್ಸಾಹಗಳಿಗೆ ಆಸ್ಪದ ನೀಡುವ ಹೊಸ ಮನೋಧರ್ಮವನ್ನೂ ನಾವು ಕಾಣಬಹುದು. ಬದುಕಿನ ಈ ಮುಖವನ್ನು ಹೆಚ್ಚು ಅನುಕಂಪ ತನ್ಮಯತೆಗಳಿಂದ ಕಂಡು ಅದರಲ್ಲಿ ಭಾಗಿಯಾಗುವ ಈ ಹೊಸ ಮನೋಧರ್ಮವು ಈವರೆಗಿನ ಒಟ್ಟು ದೃಷ್ಟಿಕೋನಕ್ಕಿಂತ ಭಿನ್ನವಾದುದೇ ಸರಿ.



ಶೂದ್ರ

1982ರಲ್ಲಿ ಅವರ ಮುಖ್ಯ ಒಲವು ತ್ರಿಮಾನ ಸ್ವರೂಪದ ಶಿಲ್ಪದಿಂದ ದ್ವಿಮಾನ ಸ್ವರೂಪದ ಚಿತ್ರಕಲೆಯತ್ತ ಹೊರಳಿತು. ಆದರೆ ಹಲವು ವರ್ಷಗಳಿಂದ ಶಿಲ್ಪ ಕಲೆಯ ತ್ರಿಮಾನಕ್ಕೆ ಒಗ್ಗಿಹೋಗಿದ್ದ ಪುಷ್ಪಮಾಲರಿಗೆ ದ್ವಿಮಾನದ ಸಮತಲ ಮೇಲ್ಮೈಯ ಒಂದು ಸವಾಲೆ ಆಯಿತೆನ್ನಬಹುದು. ಚಿತ್ರಕಲೆಯಲ್ಲಿ ತೀವ್ರವಾದ ಆಸಕ್ತಿಯನ್ನು ಬೆಳೆಸಿಕೊಂಡ ಈ ಹಂತದಲ್ಲಿ ಶಿಲ್ಪ ಮತ್ತು ಚಿತ್ರಮಾಧ್ಯಮಗಳೆರಡಕ್ಕೂ ಮಧ್ಯಸ್ಥವಾದ ಉಬ್ಬುಗೆತ್ತನೆಗಳನ್ನು—ಮರಚ್ಚು ಮತ್ತು ಸುಡಾವೆ ಮಣ್ಣುಗಳೆರಡೂ ಮಾಧ್ಯಮಗಳಲ್ಲಿ—ರಚಿಸಿರುವುದು ಸಹಜವಾಗಿ ಕಾಣುತ್ತದೆ. ಇಲ್ಲಿಯ ಮುಖ್ಯ ಕಾಳಜಿಗಳೂ ಬಾಲ್ಯದ ನೆನಪುಗಳೆ ಆದರೂ ಈ ಹಂತದ ವಿಷಯ—ವೈವಿಧ್ಯತೆಯು ಗಮನೀಯ ಪ್ರಮಾಣದ್ದು.

ಇಲ್ಲಿಯ ಮರಚ್ಚುಗಳು ಗ್ರೀಕ್ ಜಾಡಿಗಳ ಮೇಲಿನ ಸಮತಲ ಚಿತ್ರಗಳನ್ನು—ಅವುಗಳ ಕೆಂಪು ಹಿನ್ನೆಲೆಗೆ ಬದಲಾಗಿ ಬಿಳಿಯ ಹಿನ್ನೆಲೆಯ ಮೇಲೆ—ಕಪ್ಪು ಆಕೃತಿಗಳನ್ನು ನಮ್ಮ ನೆನಪಿಗೆ ತರುತ್ತವೆ. ಈ ಮರಚ್ಚುಗಳ ಮುಖ್ಯ ಆಸಕ್ತಿಗಳು ಮನುಷ್ಯ ರೂಪವನ್ನೆ ತಳೆದರೂ ಈಗಾಗಲೆ ಹೇಳಿದಂತೆ, ಅವು ವ್ಯಂಗ್ಯ, ಟೀಕೆಗಳಿಂದ ದೂರವಾದ ಉತ್ಸಾಹ, ಪ್ರೀತಿ, ಸ್ನೇಹಗಳನ್ನು ಅನುಕಂಪದಿಂದ ಸ್ವೀಕರಿಸಿರುವ ರೀತಿಯವು. ಉದಾಹರಣೆಗೆ ಈ ಅವಧಿಯ 'ಒಲವಿನ ಗೆಳತಿಯರು' ಅಥವಾ 'ಸರ್ತಿಸುತ್ತಿರುವ ಹುಡುಗಿ' ಮುಂತಾದ ಕೃತಿಗಳನ್ನು ನೋಡಬಹುದು. ಈ ಎಲ್ಲ ಮರಚ್ಚುಗಳಿಗೂ ಅನ್ವಯಿಸುವ ಒಂದು ಮಾತೆಂದರೆ, ಇಲ್ಲಿನ ಯಾವುದೆ ಒಂದು ಸಂಯೋಜನೆಯಲ್ಲೂ ಒಂದಕ್ಕಿಂತ-ಹೆಚ್ಚೆಂದರೆ ಎರಡೆ-ವ್ಯಕ್ತಿಗಳ ಚಿತ್ರಗಳಿದ್ದು, ಅವುಗಳ ವಸ್ತ್ರಗಳಲ್ಲಿಯಷ್ಟೆ ನಾವು ತ್ರಿಮಾನದ ಸೂಚನೆಯನ್ನು ಕಾಣುತ್ತೇವೆ. ಶರೀರದ ಮೇಲ್ಮೈಯ ಏರುತಗ್ಗುಗಳನ್ನು ಅಲಕ್ಷಿಸಿ ಒಟ್ಟು ಸಂಯೋಜನೆಯ ಸಮತಲವನ್ನು ಪ್ರಬಲವಾಗಿಸಿ ಚಿತ್ರಕಲೆಗೆ ಹತ್ತಿರವಾಗುವ ಹಂಬಲವು ಇಲ್ಲಿದೆ. ಈ ಸಮತಲದ ಭಾವನೆಯ ಮತ್ತೂ ತೀವ್ರವಾಗುವಂತೆ ಈ ವ್ಯಕ್ತಿಗಳ ಹಿನ್ನೆಲೆಯ ಹೂವುಗಳು ದೃಶ್ಯಾಂತರ ಮತ್ತು ತ್ರಿಮಾನಗಳಿಗೆ ಬದ್ಧವಾಗದ ಸಮತಲ ಸ್ವರೂಪದ್ದಾಗಿವೆ. ಆದರೆ, ಈ ಹೂವುಗಳ ಮತ್ತು ಆಕೃತಿಗಳ ಲಯ, ವೈವಿಧ್ಯತೆಗಳಿಂದ ಒಟ್ಟು ಸಂಯೋಜನೆಯು ಲವಲವಿಕೆ, ಜೀವಂತಿಕೆಗಳನ್ನು ಪಡೆದು, ಅಚಲವಾಗದೆ ನಮ್ಮನ್ನು ಯಶಸ್ವಿಯಾಗಿ ಆಕರ್ಷಿಸುತ್ತವೆ.

ಈ ಮರಚ್ಚುಗಳಲ್ಲಿ ಕಾಣದ ವಿಷಯ ವೈವಿಧ್ಯತೆಯು ಸುಡಾವೆ ಮಣ್ಣಿನ ಉಬ್ಬುಗೆತ್ತನೆಗಳಲ್ಲಿ ಕಂಡುಬರುತ್ತದೆ. ಇಲ್ಲಿ ಮೊಟ್ಟಮೊದಲ ಬಾರಿಗೆ ಪುಷ್ಪಮಾಲರವರ ಸೀಮಿತವಾದ ಪ್ರಪಂಚವು ಪ್ರಾಣಿಗಳನ್ನು ಒಳಮಾಡಿಕೊಂಡು ಹಿಗ್ಗುತ್ತದೆ. ನಿಖರವಾದ ಸಮ ಪ್ರಮಾಣದ ಧಾರ್ಮಿಕ ಗಾಂಭೀರ್ಯವನ್ನು ಸೂಚಿಸುವ ಸಣ್ಣ ಗುಡಿಗಳಂತಹ

ಚೌಕಟ್ಟುಗಳೊಳಗೆ ಇಲ್ಲಿ ಭವ್ಯವಾಗಲೆತ್ನಿಸಿರುವುವು. ಆಧುನಿಕ ಸಮಾಜದ ಸಾಮಾನ್ಯ ಘಟನೆಗಳೆನ್ನುವಂತಹ ಕನ್ನಡಿಗೆ ಬೆನ್ನು ಕೊಟ್ಟು ನಿಂತ ಮೊಗ್ಗಿನ ಜಡೆಯ ಹುಡುಗಿ, ಬೀಡಿ ಸೇದುವವ, ಇಲಿಯನ್ನು ಹಿಡಿಯಲೆತ್ನಿಸುತ್ತಿರುವ ಬೆದರುಗಣ್ಣಿನ ಬೆಕ್ಕು ಇತ್ಯಾದಿಗಳು. ಸುಡಾವೆಮಣ್ಣಿನ ಈ ಚೌಕಟ್ಟುಗಳು ಸಾಮಾನ್ಯವಾಗಿ ಚಚ್ಚೌಕ ಅಥವ ಲಂಬಗತಿಯ ಆಯಾಕಾರದ ತಳಭಾಗವನ್ನು ಮತ್ತು ತ್ರಿಕೋನಾಕೃತಿಯ ಕಮಾನಿನಾಕೃತಿಯ ಮೇಲ್ಭಾಗಗಳನ್ನು ಹೊಂದಿದ್ದು ನಿಖರವಾದ ಸಮಪ್ರಮಾಣದಿಂದ ದೃಢತ್ವ. ಅಚಲತೆಗಳ ಸೀಮೆಯನ್ನು ನಿರ್ಮಿಸಿದರೂ ಸಹ ಇದಕ್ಕೆ ವೈದೃಶ್ಯವಾಗಿ ಆ ಚೌಕಟ್ಟಿನೊಳಗಿನ ವ್ಯಕ್ತಿ. ಪ್ರಾಣಿಗಳಲ್ಲಿ ನಾವು ನಿರಂತರ ಲವಲವಿಕೆ, ಜೀವಂತಿಕೆಗಳನ್ನು ಕಾಣಬಹುದು. ಇಲ್ಲಿನ ಆಕೃತಿಗಳ ಕಣ್ಣುಗಳಲ್ಲಿ ಹೊಳೆಯುವ ವಿಚಿತ್ರ ಉದ್ವೇಗ ಮತ್ತು ತನ್ಮಯತೆ. ಶರೀರ ವಿನ್ಯಾಸದಲ್ಲಿನ ಲಯಬದ್ಧತೆ, ವೈವಿಧ್ಯ ಈ ಅಂಶಗಳಿಂದ ಈ ಚಲನಶೀಲತೆಯ ಅನುಭವವು ನಮಗಾಗುತ್ತದೆ. 'ಶೃಂಗಾರ' (Dressing up) 'ಬೆಕ್ಕು ಮತ್ತು ಇಲಿ' 'ಬೀಡಿ ಸೇದುವವ' ಮುಂತಾದ ಕೃತಿಗಳು ಈ ಮಾತನ್ನು ಸಮರ್ಥಿಸಬಲ್ಲವು.

## ಇತ್ತೀಚಿನ ಸಮನ್ವಯ ಮಾರ್ಗ

ಒಂದು ನಿರ್ದಿಷ್ಟ ಕ್ರಮದಲ್ಲಿ ಸುಸಂಗತವಾಗಿ ವಿಕಾಸ ಹೊಂದಿದ ಪುಷ್ಪಮಾಲರವರ ಕಲೆಯ ಈಚಿನ ಮೂರು ವರ್ಷಗಳ ಮುಖ್ಯ ಕೃತಿಗಳಲ್ಲಿ ನಾವು ಕಾಣುವುದು ವಸ್ತು-ಮಾಧ್ಯಮಗಳೆರಡರ ದೃಷ್ಟಿಯಿಂದಲೂ ಭೂತ–ವರ್ತಮಾನಗಳನ್ನು ಒಂದುಗೂಡಿಸಲು ಯತ್ನಿಸಿರುವ ಸಮನ್ವಯ ಮಾರ್ಗ. ಉದಾಹರಣೆಗೆ 'ಕವಡೆ ಹಿಡಿದ ಹುಡುಗಿ' ಯಂಥ ಕೃತಿಯಲ್ಲಿನ ಪ್ರಶಾಂತ ಮುಖಭಾವ. ಅಚಲಭಾಗಿ, ರವಿಕೆಯ ಮೇಲಿನ ಚಿತ್ತಾರಗಳು ಹಿಂದೂನದಿ ನಾಗರಿಕತೆಯ ಸುಡಾವೆಮಣ್ಣಿನ ಭಾವಚಿತ್ರವನ್ನೂ ವರ್ತಮಾನದ ಅನುಭವವೊಂದನ್ನು ಒಟ್ಟಿಗೆ ಸಮ್ಮಿಳನಗೊಳಿಸಬಲ್ಲುದು. ಇಲ್ಲಿ ಭಾವ ನಿಯಂತ್ರಣದ ಸಮತೋಲದ ಜೊತೆಗೆ ಪುಷ್ಪಮಾಲರಲ್ಲಿ ಬೆಳೆದು ಬಂದಿರುವ ಅಭಿವ್ಯಕ್ತಿ ತೀವ್ರತೆಗೆ ಅನುವಾಗುವ ಲಯಬದ್ಧ ವಿನ್ಯಾಸವೂ ಗಮನೀಯ. ಯಾವ ಕೋನದಿಂದಲೂ ಈ ಕವಡೆಯ ಹುಡುಗಿಯು ಪ್ರಶಾಂತಳಾಗಿ, ಆವಳ ಒಟ್ಟು ನೋಟದಲ್ಲಿ ಅಚಲತೆಯೆ ಪ್ರಬಲವಾಗಿರುವಂತೆ ಕಂಡುಬಂದರೂ, ಕವಡೆಯನ್ನು ಬೆನ್ನ ಹಿಂದೆ ಬಚ್ಚಿಟ್ಟು ಕೊಂಡಿರುವ ಭಂಗಿಯಿಂದ ವಿಚಿತ್ರವಾದ ಗೋಪ್ಯತೆ ಮತ್ತು ಈ ಗಾಂಭೀರ್ಯ-ಗೋಪ್ಯತೆಗಳನ್ನು ಒಮ್ಮೆಗೆ ಒಟ್ಟುಗೂಡಿಸುವುದರಿಂದ ತುಂಟತನದ ಪರಿಣಾಮಕಾರಿಯಾದ ಅಭಿವ್ಯಕ್ತಿಯೂ ಇಲ್ಲಿ ಉಂಟಾಗಿ 'ಬ್ರಾ ಧರಿಸುತ್ತಿರುವ ಮಹಿಳೆ'ಯಲ್ಲಿ ಕಾಣದ ಯಶಸ್ಸನ್ನು ಇಲ್ಲಿ ಕಾಣುತ್ತೇವೆ. ಪುಷ್ಪಮಾಲರವರ ಈ ಅವಧಿಯ ಉತ್ಕೃಷ್ಟ ಕೃತಿಗಳಲ್ಲಿ ಒಂದಾದ ಇದರಲ್ಲಿ ಈ ಕಲಾವಿದೆಯು ಪ್ರತಿಕೃತಿ ರಾಹಿತ್ಯದಿಂದ ದೂರವಾಗಿ ಯಥಾರ್ಥ ಅನುಭವ

ವೊಂದಕ್ಕೆ ಹತ್ತಿರವಾಗುತ್ತಿದ್ದು ತಮ್ಮ ಒಟ್ಟು ಧೋರಣೆಯಲ್ಲಿ ಎಂದಿನ ನಿಸ್ಸಂಗತ್ವವನ್ನು ಪರಿಣಾಮಕಾರಿಯಾಗಿ ಸಾಧಿಸಿದ್ದಾರೆ.

ಇದೇ ರೀತಿ 'ಪರ್ಸ್ ಹಿಡಿದ ಹುಡುಗಿ'ಯನ್ನು ಕ್ರಿ.ಶ. ಒಂದನೆಯ ಶತಮಾನದ ಸಾಂಚಿಯ ಯಕ್ಷಿಯದಂತಹ ಶಾರೀರಕ ವಿನ್ಯಾಸಕ್ಕೆ ಹತ್ತಿರವಾಗಿಸಿ ಆಧುನಿಕ ಜೀವನ ಶೈಲಿಯ ಅಭಿವ್ಯಕ್ತಿಗೂ ಹೊಂದಿಸಿರುವ ರೀತಿಯಲ್ಲಿ ಭಾವನಿಯಂತ್ರಣ ಮತ್ತು ಅಭಿವ್ಯಕ್ತಿ ತೀವ್ರತೆಗಳ ಸಮನ್ವಯವಿದೆ.

1982ರ ಬೆಕ್ಕು, ಇಲಿ, ಅಳಿಲುಗಳಂತಹ ಪ್ರಾಣಿಗಳ ನಿರಂತರ ಚಲನೆ, ಹುಡುಕಾಟ, ಚಂಚಲತೆಗಳು 1983 ರಿಂದೀಚಿನ ಹಂದಿ, ನಾಯಿಗಳನ್ನು ಕುರಿತ ಶಿಲ್ಪಗಳಲ್ಲಿ ಅಚಲತೆ, ಹೊಟ್ಟೆ ಬಾಕತನ, ಮೈಗಳ್ಳತನ ಮುಂತಾದುವಕ್ಕೆ ಎಡೆಮಾಡಿರುವುದು ಗಮನೀಯ ಶೂನ್ಯದಲ್ಲಿ ದೃಷ್ಟಿನೆಟ್ಟು ತಾನು ಆಕ್ರಮಿಸಿದ ನೆಲದುದ್ದಕ್ಕೂ ಶರೀರವನ್ನೆಲ್ಲ ಚಾಚಿ ಯಾವ ಭಾವನೆಯನ್ನು ವ್ಯಕ್ತಪಡಿಸದೆ ಕಾಲಸ್ಥಲಗಳಲ್ಲಿ ನಿರಂತರವಾಗಿ, ಶಾಶ್ವತವಾಗಿ ಬಿದ್ದುಕೊಂಡಿರುವ ಇಲ್ಲಿನ ಹಂದಿಗಳಲ್ಲಿ ಒಂದು ಸಂದರ್ಭ, ಒಂದು ಸ್ಥಿತಿಯನ್ನು ಪರಿಣಾಮಕಾರಿಯಾಗಿ ಅಮರವಾಗಿಸುವ ಪ್ರತಿಸೃಷ್ಟಿಯ ಅಭಿವ್ಯಕ್ತಿ ಸಾಮರ್ಥ್ಯವನ್ನು ಕಾಣುತ್ತೇವೆ.

"Humour is the central point of my perception of the world. It is the device by which I express the contradictory feelings of attraction, repulsion...... in a concrete form by using a mixture of caricature and sensuality, sympathy and mockery" ಎಂದು ಪುಷ್ಪಮಾಲರವರು ಎಂ. ಎ. ಪದವಿಯ ಪ್ರಬಂಧದಲ್ಲಿ ತಮ್ಮ ಧೋರಣೆಯನ್ನು ಸ್ಪಷ್ಟಮಾಡಿದ್ದಾರೆ. ಅವರ ತೀಕ್ಷ್ಣ ಸಂವೇದನಾ ಶೀಲತೆಗೆ ಬದುಕಿನ ಅತ್ಯಂತ ಗಂಭೀರವಾದ ಸಂದರ್ಭಗಳು, ಆ ಕೃತಿಗಳ ಹಿಂದಡಗಿರುವ ವೈಚಿತ್ರ್ಯ, ನಾಟಕೀಯತೆಗಳು ಎಂದಿಗೂ ಪರಕೀಯವಾಗುವುದಿಲ್ಲ. ಸಹಜ, ಸಾಮಾಜಿಕ ವ್ಯಕ್ತಿ ಸಂದರ್ಭಗಳಿಗೆ ಅಸಹಜವಾದ ಅಥವ ಅತಿಶಯವಾದ ರೂಪ ನೀಡಿ ನಮ್ಮೊಳಗಿದ್ದೂ ನಮ್ಮಂತಾಗದೆ ನಮ್ಮ ನೋಟ, ಆಲೋಚನೆಗಳನ್ನು ಹೊಡೆದೆಬ್ಬಿಸಬಲ್ಲ ಭಾವುಕತೆ, ಸಮತೋಲ, ಅಭಿವ್ಯಕ್ತಿ ಸಾಮರ್ಥ್ಯ ಇವುಗಳನ್ನು ಅವರು ಯಶಸ್ವಿಯಾಗಿ ಸಾಧಿಸಬಲ್ಲರೆಂಬುದು ನಿಸ್ಸಂದೇಹ. ಆದ್ದರಿಂದಲೆ ಹಾಸ್ಯವೆ ತಮ್ಮ ಗ್ರಹಿಕೆಯ ಮೂಲಸೆಲೆಯೆಂದು ಪುಷ್ಪಮಾಲರವರು ಹೇಳಿಕೊಂಡರೂ ಅದರ ಪಾತಳಿಯಲ್ಲಿ ನಿರಂತರವಾಗಿ ಹರಿಯುವ ಸ್ವವಿಮರ್ಶಾತ್ಮಕ ಧೋರಣೆಯೊಂದು ವೈಚಾರಿಕತೆಗೂ ಅವಕಾಶ ನೀಡಿದೆ.

## ಒಂದು ಸವಾಲು

ಟೂತ್ ಪೇಸ್ಟು, ಬ್ಲೇಡು
ಅಂಡರ ವೇರುಗಳ
ಪ್ರಚಾರ ಚಪ್ಪರದಸುತ್ತ
ಹೆಣ್ಣು ಬೊಂಬೆಯು ಅರೆನಗ್ನ
ಅಂಗವಿನ್ಯಾಸಕ್ಕೆ
ಸನ್ಯಾಸತ್ವ ಸಾರಬೇಕೆಂದು
ಆವೇಶ ಆಕ್ರೋಶ
ಉಬ್ಬಿಕಿ ತುಳುಕುತ್ತ
ಆಕಾಶವಾಣಿಯಲಿ ಗುಡುಗಿ
ದೂರದರ್ಶನದಲಿ ಒದರಿ
ತೂರಿ ಬಿಸಾಕುವ
ಲಿಫ್‌ಸ್ಟಿಕ್ ತುಟಿಗಳ
ಸೆರಗಲ್ಲಿ ಜರಿ ನುರುಗುವ
ಅವಕುಂಟನ ವತಿಯರೇ
ಹಳ್ಳಿ ಹಳ್ಳಿಗೊಂದು ಕೇರಿಯಲ್ಲಿ
ಹದಿನಾರು ತೇಪೆಗಳೂ
ಮರೆ ಮಾಚದೆ
ಸಿಗ್ಗೊಳಗೆ ಉಡುಗಿ
ಕನಸೊಳಗೆ ನವೆಯುವ
ಹೆಣ್ಣ ಸಿರಿ ಸಂಪತ್ತುಗಳಿಗೆ
ಮತ್ತೆ,
ಇಪ್ಪರಿಸಿ ಬಡಿವ
ಚಂದ್ರಗುತ್ತಿಯ ಅತಿಯ
ಬೆತ್ತಲೆ ಹೀರುವ
ತೆವಲು ನಸೆ ನೆತ್ತಿಗಳಿಗೆ
ಕಾವಲು ಗಾತಿಯರಾಗಿ
ನಿಲ್ಲ ಬಲ್ಲಿರಾ ?

ಉತ್ತನೂರು ರಾಜಮ್ಮ ವಿ. ಶೆಟ್ಟಿ

ಉತ್ತನೂರು ರಾಜಮ್ಮ ವಿ. ಶೆಟ್ಟಿ, c/o ಎಸ್. ವಿಶ್ವನಾಥಶೆಟ್ಟಿ, ವಕೀಲರು, ಚಿಂತಾಮಣಿ, ಕೋಲಾರ ಜಿಲ್ಲೆ.



# ಕನಸಿಗೊಂದು ಕಣ್ಣು

## ಜಿ.ಎಸ್. ಎಸ್. ಸುತ್ತ ಕೆಲವು ನೆನಪುಗಳು

ಜಿ. ಎಸ್. ಎಸ್. ಎಂಬ ಶಬ್ದ ನನ್ನಂತೆ ನೂರಾರು ಜನ ವಿದ್ಯಾರ್ಥಿಗಳಿಗೆ ಪ್ರಿಯವಾದ ಶಬ್ದ. ಒಂದು ಶಬ್ದ ಯಾಕೆ ಪ್ರಿಯವಾಗುತ್ತದೆ ಎಂದು ಹೇಳಲು ಹೊರಟಾಗ ನೂರಾರು ಮಂದಿ ಭಿನ್ನ ರೀತಿಯ ವಿವರಣೆಯನ್ನು ಕೊಡುತ್ತ ಹೋಗಬಹುದು. ಆದರೆ ಅರ್ಥ ಗ್ರಹಿಕೆಯ ದೃಷ್ಟಿಯಿಂದ ಅದೊಂದು ಸಮಷ್ಟಿ ಶಬ್ದವಾಗಿರುತ್ತೆ. ಇದನ್ನು ಒಮ್ಮೆ ಒಪ್ಪಿಕೊಂಡ ಮೇಲೆ ಅಥವಾ ಸ್ವೀಕರಿಸಿದ ಮೇಲೆ ಸರಳೀಕರಿಸಿಕೊಂಡು ಯೋಚಿಸಲು ಸಾಧ್ಯವಾಗುವುದೇ ಇಲ್ಲ. ಈ ದೃಷ್ಟಿಯಿಂದ ನನ್ನ ಮಟ್ಟಿಗೆ ಜಿ. ಎಸ್. ಎಸ್. ರವರ ಶಕ್ತಿ ಸಾಮರ್ಥ್ಯ ಮತ್ತು ದೌರ್ಬಲ್ಯಗಳು ಸದಾ ಪ್ರಿಯವಾದಂತಹವು. ಪುಟ್ಟ ಹುಡುಗನಂತೆ ಲವಲವಿಕೆಯನ್ನು ತುಂಬಿಕೊಂಡು ಮತ್ತೆ ನಮಗೆ ಗೊತ್ತಿಲ್ಲದಂತೆಯೇ ಸಿಟ್ಟು ಮಾಡಿಕೊಂಡು ಬಿಡುವ ; ಆ ಸಿಟ್ಟು ಕ್ಷಣಿಕವೆಂಬಂತೆ ಗಾಳಿಯಲ್ಲಿ ತೇಲಾಡುತ್ತ ಹೋಗುವ ವ್ಯಕ್ತಿತ್ವ ಜಿ. ಎಸ್. ಶಿವರುದ್ರಪ್ಪರವರದ್ದು. ಇವರ ನಡವಳಿಕೆಯಂತೆ-ನಡಿಗೆಯೂ ಸದಾ ತೀವ್ರ ರೀತಿಯ ಸ್ವರೂಪವನ್ನು ಪಡೆದದ್ದು. ಮಕ್ಕಳಂತೆ ಓಡುವ ಮನಸ್ಸಿನದು. ನಿರಂತರ ಒಳ್ಳೆಯದರ ಬಗ್ಗೆ ಗುಣಾಕಾರ ಹಾಕುತ್ತ ಮನುಷ್ಯ ಸಂಬಂಧಗಳ ವೈಪರೀತ್ಯಗಳ ನಡುವೆ ಘಟಿಸಬಹುದಾದ 'ಭಾವ ಸಂಬಂಧ'ವನ್ನು ಆಲಂಗಿಸುವ ಕ್ರಿಯೆ ಪರಿಸರವನ್ನು ಚೇತೋಹಾರಿಯಾಗಿಸುವ ವ್ಯಕ್ತಿತ್ವ ಆತ್ಮೀಯವಾದದ್ದು.

ಜಿ. ಎಸ್, ಎಸ್. ರವರಿಗೆ ಅರವತ್ತು ತುಂಬಿ ಈಗಾಗಲೇ ಮೂರು ನಾಲ್ಕು ತಿಂಗಳು ಕಳೆದು ಬಿಟ್ಟಿವೆ. ಅಂದಿನಿಂದಲೂ 'ಕನಸಿಗೊಂದು ಕಣ್ಣು'ವಿನಲ್ಲಿ ಅವರ ವ್ಯಕ್ತಿತ್ವವನ್ನು ಹೇಗೆ ದಾಖಲು ಮಾಡಬೇಕೆಂಬುದು ಗೊತ್ತಿಲ್ಲದೆ ನರಳಿದ್ದೇನೆ. ಈ ನರಳಾಟಿಕೆಯ ನಡುವೆ ಹೀಗೆಯೇ ಬರೆಯಬೇಕೆಂದು ಆಜ್ಞೆ ಮಾಡಿ ಹೋದ ಶಬ್ದಗಳು ಎಷ್ಟೋ ನಾಪತ್ತೆಯಾಗಿಬಿಟ್ಟಿವೆ. ಕೆಲವು ಶಬ್ದಗಳು ಉಳಿದುಕೊಂಡು ಒಂದು 'ಪ್ರೀತಿಯ ವ್ಯಕ್ತಿತ್ವ'ವನ್ನು ಚಿತ್ರಿಸಲು ಪ್ರಯತ್ನಿಸಿದ್ದರೂ ; ಎಲ್ಲಿಂದ ಸುರುವಾಗುವುದು ಹೇಗೆ ಸುರು ಮಾಡುವುದು ಎಂಬ ಗೊಂದಲ ಈಗ ಬರೆಯುತ್ತಿರುವ ನನಗೆ ಸ್ಪಷ್ಟವಾಗಿಲ್ಲ. ಯಾಕೆಂದರೆ ನಾವು ಎಷ್ಟೋ ಬಾರಿ ಅತ್ಯಂತ ಪ್ರೀತಿಸುವ ಮತ್ತು

ದ್ವೇಷಿಸುವ ವ್ಯಕ್ತಿಗಳ ಬಗ್ಗೆ ಬರೆಯುವುದು ಒಂದು ರೀತಿಯ ಹಿಂಸೆಯ ಕೆಲಸ ಆ ಹಿಂಸೆ ಆ ಕ್ಷಣಕ್ಕೆ ಬೆಚ್ಚಗಿದ್ದರೂ ಸಹ.

ನಮ್ಮ ಅಂತಃ ಸಂಬಂಧಗಳ ನಡುವೆ ಯಾವುದು ಜೀವನ? ಯಾವುದು ಜೀವನ ವಲ್ಲ? ಇದು ಜೀವನವಲ್ಲವೆಂದು ತಿಳಿದುಕೊಂಡು ಅದರ ಬಗ್ಗೆ ಒಂದು ಪರಾ ಎಳೆದು ಬಿಸಾಕಿದ್ದರೂ; ಎಂದೋ ಒಂದು ದಿನ ಬಿಸಾಕಿದ್ದ ಪರಾವನ್ನು ಎತ್ತಿ ನೋಡಿದಾಗ ಬದುಕಿನ ಪಾಠಗಳು ಮಾರ್ಮಿಕವಾಗಿ ಗೋಚರಿಸಲು ತೊಡಗಿದಾಗ 'ಭೂತ'ವನ್ನು ಬಿಸಿ ಬಿಸಿಯಾಗಿ ಅಪ್ಪಿಕೊಂಡು ಮುದ್ದಾಡುತ್ತೇವೆ, ಆಗ ಘಟಿಸ ಬಹುದಾದ ಸಂಘರ್ಷಕ್ಕೆ ಎಷ್ಟರಮಟ್ಟಿನ ತಾತ್ಕಾಲಿಕತೆ (ವರ್ತಮಾನ) ಇರುತ್ತದೆ ಎಂಬುದು ಹೇಳುವುದು ಕಷ್ಟ. ಯಾಕೆಂದರೆ ಪ್ರತಿ ಕ್ಷಣದಲ್ಲೂ ಅಳು-ನಗುವಿನ ಸಂಬಂಧ ಗೋಚರಿಸುವುದೇ ಇಲ್ಲ. ಯಾವುದೋ ಮಾತಿಗೆ ನಗಬಹುದು—ತಕ್ಷಣ ಅಳ ಬಹುದು. ಈ ಕಾರಣಗಳಿಂದ ನನ್ನನ್ನು ಅತ್ಯಂತ ಡಿಸ್ಟರ್ಬ್ ಮಾಡಿದ ವರ್ಷಗಳೆಂದರೆ ಸೆಂಟ್ರಲ್ ಕಾಲೇಜಿನ ಅನುಭವಗಳು. ಅಲ್ಲಿ ದೊರಕಿದ ವ್ಯಕ್ತಿಗಳು ಕ್ಷಣಗಳು ಈಗಲೂ ಆತ್ಮೀಯ. ಆದ್ದರಿಂದಲೇ ಇವರ ಕೇಂದ್ರ ಬಿಂದುವಾದ ಜಿ. ಎಸ್. ಎಸ್.ರವರ ಬಗ್ಗೆ ಬರೆಯಲು ತೊಡಗಿದಾಗ ಅದು ನನ್ನ ಬಗ್ಗೆಯೂ ಹೆಚ್ಚು ಹೇಳಿಬಿಡುತ್ತದೆಯೆಂಬ ಸಂಕೋಚ ಗಾಢವಾಗಿದೆ.



ಅದೇ ಹಸಿರು ಹುಲ್ಲು, ಅದಕ್ಕೆ ಹೊಂದಿಕೊಂಡಂತೆ ಕೆಂಪನೆಯ ಗುಲ್‌ಮುಹರ್ ಹೂವಿನ ಗೊಂಚಲು ಕನ್ನಡ ವಿಭಾಗದ ಉದ್ದಗಲಕ್ಕೂ ತುಂಬಿಕೊಂಡಿತ್ತು. ಸೆಂಟ್ರಲ್ ಕಾಲೇಜಿನಿಂದ ಪ್ರತ್ಯೇಕವಾಗಿದ್ದ ಪ್ರಸನ್ನಕುಮಾರ್ ಬ್ಲಾಕ್ ಒಂದು ದೃಷ್ಟಿಯಿಂದ ಸೆಂಟ್ರಲ್ ಕಾಲೇಜಿಗಿಂತ ಬಿನ್ನವಾಗಿದ್ದ ಕಟ್ಟಡಗಳು. ನೋಡುವುದಕ್ಕೆ ಮೋಹಕ ವಾಗಿದ್ದುವು. ಈ ಎಲ್ಲ ಮೋಹಕತೆಯ ನಡುವೆ ಗುಲ್ ಮುಹರ್ ಮರಗಳ ನಡುವೆ ಹೊಂಗೆಮರವೊಂದು ನಾಚಿಕೊಂಡು ನಿಂತಿತ್ತು. ಸದಾ ತಂಪಿನ ನೆರಳನ್ನು ಕೊಡುವ ಹೊಂಗೇ ಮರ.

ಮಧ್ಯಾಹ್ನ ಎರಡು ಗಂಟೆಯ ಸಮಯವಾಗಿತ್ತು. ನಮ್ಮದು ಪುಟ್ಟ ಪೋಲಿಪಟಾಲಂ ಇತ್ತು. ನಲವತ್ತೈದು ಆನರ್ಸ್ ವಿದ್ಯಾರ್ಥಿಗಳಲ್ಲಿ ಹುಡುಗಿಯರದ್ದೇ ಸಂಖ್ಯೆಯಲ್ಲಿ ಜಾಸ್ತಿ ಇತ್ತು. ಆದರೆ ನಮ್ಮ ಪಟಾಲಂನಲ್ಲಿ ಮಾಧವರಾವ್. ಹಿರೇಮಠ, ವಿರೂಪಾಕ್ಷ ವೀರೇಂದ್ರ. ವಿಜಯಶ್ರೀ, ಅನುಸೂಯ, ನಾಗರತ್ನ, ಉದ್ದನೆಯ ಶೈಲಜ, ಕನ್ನಡಕದ

ಶೈಲಜ. ಕನ್ನಡಕದ ಶೈಲಜ ತುಂಬ ಚೂಟಿಯಾದ ಹುಡುಗಿಯಾಗಿದ್ದಳು. ಅಷ್ಟೇ ಮಡಿವಂತರ ಕಣ್ಣಿಗೆ ಚೆಲ್ಲು ಎಂದು ಕಾಣಿಸುತ್ತಿದ್ದಳು. ಒಮ್ಮೆ ಈ ಹುಡುಗಿಯು ಹತ್ತಿರಭೈರಪ್ಪನವರು 'ದೂರಸರಿದವರು' ಕಾದಂಬರಿಯನ್ನು ಗೇಲಿಮಾಡಿದ್ದಕ್ಕೆ ಎರಡು ವರ್ಷ ನನ್ನೊಡನೆ ಮಾತು ಬಿಟ್ಟಳು. ಈ ಹುಡುಗಿಯದು ದೊಡ್ಡ ಕಥೆ. ಈಗ ಅಮೇರಿಕದಲ್ಲಿ ಕಪ್ಪು ಜನರ ಸಂಘಟನೆಯಲ್ಲಿದ್ದಾಳೆ. ಮದುವೆಯಾಗಿದ್ದ ಬ್ರಾಹ್ಮಣ ಹುಡುಗನೊಡನೆ ವಿಚ್ಛೇದನ ತಗೊಂಡು ನೀಗ್ರೋ ಒಬ್ಬನನ್ನು ಮದುವೆಯಾಗಿದ್ದಾಳೆ. ದೂರದ ನಾಡಿನಲ್ಲಿ ತುಂಬುಜೀವನ ಅನುಭವಿಸುತ್ತಿರುವ ಹುಡುಗಿ. ಮೂರು ವರ್ಷಗಳ ಕೆಳಗೆ ಬೆಂಗಳೂರಿಗೆ ಬಂದಿದ್ದಾಗ ನನಗೆ ಉಪದೇಶ ನೀಡಿಹೋದಳು. ಶ್ರೀನಿವಾಸ್ ನಮ್ಮ cause‌ಗೆ ಸಹಕರಿಸದ ಯಾರೊಡನೆಯೂ ಬೆರೆಯಬೇಡ ಎಂದು. ಅದನ್ನು ಕೇಳಿ 'ದೂರಸರಿದವರು' ಕಾದಂಬರಿಯ ಸಂದರ್ಭಕ್ಕೆ ಹೋದೆ. ಕಾಲಗತಿಯಲ್ಲಿ ಸಂಬಂಧಗಳು ಎಷ್ಟೊಂದು ತೀವ್ರ ರೀತಿಯಲ್ಲಿ ಸಾಗುತ್ತಿರುತ್ತವೆ ಎಂದುಕೊಂಡೆ. ದಯವಿಟ್ಟು ಕ್ಷಮಿಸಿ, ಈ ರೀತಿಒಬ್ಬೊಬ್ಬರ ಬಗ್ಗೆಯೂ ಹೇಳುತ್ತ ಹೋದರೆ ಜಿ. ಎಸ್ ಎಸ್. ರವರ ಬಗ್ಗೆ ನನ್ನ ಮಿತಿಯ ಪುಟಗಳಲ್ಲಿ ಹೇಳದೆ ಹೋಗಬಹುದು. ಅಂತೂ ನಮ್ಮದು ನಿಜವಾದ ಗೆಳೆಯರ ಗುಂಪಾಗಿತ್ತು. ಅದೊಂದು ದಿನ ಮಧ್ಯಾಹ್ನ ನಮ್ಮ ಗುಂಪಿನ ಸ್ವಲ್ಪ ಸಿಡುಕಿನ ಹುಡುಗಿಯಾಗಿದ್ದ ಅನುಸೂಯರವರ ಟಿಫನ್ ಕ್ಯಾರಿಯರ್ ಕದ್ದು ಅದರಲ್ಲಿದ್ದುದನ್ನು ತಿಂದು (ಪೂರ್ತಿ ತಿಂದವನು ನಾನೇ ಇರಬೇಕು) ಹೊರಗೆ ಮರದ ಮೇಲೆ ಕೂತು ಮರಕೋತಿ ಆಟಆಡುತ್ತಿದ್ದೆವು. ಫೈನಲ್ ಆನರ್ಸ್‌ನ ದಿನಗಳು ಅನ್ನಿಸುತ್ತೆ. ಶಿವರುದ್ರಪ್ಪನವರು ವಿಭಾಗದ ಮುಖ್ಯಸ್ಥರಾಗಿ ಬಂದು ಆರೇಳು ತಿಂಗಳಾಗಿತ್ತು. ಪಾಠ ಚೆನ್ನಾಗಿ ಮಾಡುತ್ತಿದ್ದುದರಿಂದ ಜಾಗ್ರತೆ ಎಲ್ಲರಿಗೂ ಪ್ರಿಯರಾದರು. ಅದರಲ್ಲೂ ಕವಿಯಾಗಿ ಹೆಸರು ಪಡೆದಿದ್ದರಿಂದ ನನುಗೆ ಗೊತ್ತಿಲ್ಲದೆ ಅಭಿಮಾನವನ್ನು ಬೆಳಿಸಿಕೊಂಡಿದ್ದೆವು. ಇದು ಸ್ವಾಭಾವಿಕವೂ ಇರಬಹುದು. ಆಟ ವಾಡುವ ಸಮಯಕ್ಕೆ ಪ್ರೊ. ಜಿ. ಎಸ್. ಎಸ್, ಚಿದಾನಂದ ಮೂರ್ತಿ, ಹಾಗೂ ಲಕ್ಷ್ಮಿನಾರಾಯಣ ಭಟ್ಟರು ತಿಂಡಿ ತಿಂದು ವಾಪಸ್ಸು ಬರುತ್ತಿದ್ದರು. ನಮ್ಮನ್ನು ನೋಡಿ ನಗುತ್ತ "ನಿಮಗೇನು ತರಗತಿಗಳು ಬೇಡ ಅನ್ನಿಸುತ್ತೆ" ಎಂದು ಹೊರಟುಹೋದರು. ಒಂದು ಕ್ಷಣ ನಾವೆಲ್ಲ ಗಾಬರಿಗೊಂಡೆವು. ಅದರಲ್ಲೂ ನಾನಂತೂ ಗಾಬರಿಗೊಂಡಿದ್ದೆ. ಯಾಕೆಂದರೆ ಪ್ರೈಮರಿಯಲ್ಲಿ ಮತ್ತು ಮಾಧ್ಯಮಿಕ ಶಾಲೆಯಲ್ಲಿ ಸಣ್ಣಪುಟ್ಟದ್ದಕ್ಕೆಲ್ಲ ಪೆಟ್ಟು ತಿಂದು ಬೆಂಚಿನಮೇಲೆ ದಿನವೆಲ್ಲ ನಿಂತ ಕಹಿ ನೆನಪು ಇನ್ನೂ ಮಾಸಿರಲಿಲ್ಲ.

ಮೊದಲನೆಯ ಪಿರಿಯಡ್ಡೇ ಜಿ. ಜಸ್. ಎಸ್. ರವರದ್ದು. ಅದರಲ್ಲೂ ಪಂಪ ಭಾರತ. ತರಗತಿಗೆ ಹೋದೆವು. ಅಪ್ಪಿ ತಪ್ಪಿ ನಮ್ಮ ಕಡೆ ಗಮನ ಹರಿಸಿ ಪಾಪ ಪ್ರಜ್ಞೆ ಉಲ್ಬಣಿಸುವಂತೆ ಮಾಡಲಿಲ್ಲ. ಥ್ಯಾಂಕ್‌ಗಾಡ್ ಎಂದುಕೊಂಡು ನಮ್ಮ ಪ್ರೀತಿಯ

ಮೇಸ್ಟ್ರಿಗೆ ನಮಸ್ಕಾರ ಮಾಡಿದೆವು. ಇದರ ಜೊತೆಗೆ ಮತ್ತೊಂದು ಭಯ ಬೇರೆ ಇತ್ತು, ಅನುಸೂಯರವರ ಟಿಫನ್ ಕ್ಯಾರಿಯರ್ ಖಾಲಿಮಾಡಿ ನೀರು ತುಂಬಿಟ್ಟಿದ್ದರಿಂದ ಸಾಕಷ್ಟು ಬೈಸಿಕೊಂಡಿದ್ದೆ. ಆ ಮಹಾರಾಯಿತಿ ಎಲ್ಲಿ ಜಿ. ಎಸ್. ಎಸ್. ರವರಿಗೆ ತಿಳಿಸುತ್ತಾಳೋ ಎಂದುಕೊಂಡಿದ್ದೆವು. ಆದರೆ ಆ ಹುಡುಗಿ ತಿಳಿಸಲಿಲ್ಲ.

ಜಿ.ಎಸ್.ಎಸ್. ಬರುವವರೆಗೆ ರಂ. ಶ್ರೀ ಮುಗಳಿಯವರಿಗೆ ಪ್ರೀತಿಯ ಶಿಷ್ಯನಾಗಿದ್ದೆ. ಮುಗಳಿಯವರು ಮುಖ್ಯಸ್ಥರಾಗಿದ್ದಾಗ ಭಾರತೀಯ ವಿವಿಧ ಭಾಷೆಗಳ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಒಂದುವಾರದ ವಿಚಾರಸಂಕಿರಣಮಾಡಿದ್ದರು. ಆಗ ನಾನು ಎರಡನೆಯ ಆನರ್ಸ್‌ನಲ್ಲಿದ್ದೆ. ಈ ಗೋಷ್ಠಿಯ ಸಮಯದಲ್ಲಿ ಬೇರೆ ಭಾಷೆಯ ಬಹು ಮುಖ್ಯ ವಿದ್ವಾಂಸರೆಲ್ಲ ಬಂದಿದ್ದರು. ಅವರೆಲ್ಲರ ಕ್ಷೇಮವನ್ನು ನೋಡಿಕೊಳ್ಳುವುದಕ್ಕೆ ನನ್ನನ್ನು ನೇಮಿಸಿದ್ದರು. ನನಗೆ ಬರುತ್ತಿದ್ದ ತುಂಡು ತುಂಡು ಇಂಗ್ಲೀಷ್ ಮತ್ತು ಹಿಂದಿಯ ಮೂಲಕ ಮ್ಯಾನೇಜ್‌ಮಾಡಿ ಬಹಳಷ್ಟು ಮಂದಿಗೆ ಹತ್ತಿರದವನಾದೆ. ಅದರಲ್ಲೂ ಪ್ರೊ. ದಾಸಗುಪ್ತ, ಪ್ರಭಾಕರ್ ಮಾಚ್ವೆ, ಹಾಗೂ ಕಾಶ್ಮೀರಿ ಪ್ರಾಧ್ಯಾಪಕ ಡಾ॥ ಪುಷ್ಪಾ. (ಪುಷ್ಪಾ ಅವರು ಊಟಮಾಡುವಾಗ ಹಸಿಮೆಣಸಿನ ಕಾಯಿಯನ್ನು ತಿನ್ನುವುದನ್ನು ಕಲಿಸಿ ಹೋದರು.) ಕಾರ್ಯಕ್ರಮ ಮುಗಿದ ಮೇಲೆ ಅವರ ನೆನಪಿಗಾಗಿ ಏನೇನೋ ಕೊಟ್ಟು ಹೋದರು. ವಿಮಾನ ನಿಲ್ದಾಣದಲ್ಲಿ ಅವರನ್ನು ಬೀಳ್ಕೊಡುವಾಗ ಒಂದು ತೊಟ್ಟು ಕಣ್ಣೀರು ಸುರಿಸಿದೆ. ಆದರೆ ಒಮ್ಮೆಯೂ ನನ್ನ ಸೋಮಾರಿತನದಿಂದ ಅವರಿಗೆ ಪತ್ರ ಬರೆಯಲಿಲ್ಲ. ಆ ಸಮಯದಲ್ಲಿ ತುಂಬ ಪ್ರಿಯರಾಗಿದ್ದ ಮತ್ತೊಬ್ಬ ಸಿಂಧಿ ಪ್ರೊಫೇಸರ್‌ರವರ ಸಾವಿನ ಸುದ್ದಿಯನ್ನು ಕಳೆದ ವರ್ಷ ಪತ್ರಿಕೆಯಲ್ಲಿ ಓದಿ ಒಂದು ಕ್ಷಣ ಶ್ರದ್ಧಾಂಜಲಿಯನ್ನು ಅರ್ಪಿಸಿದೆ.

ಜಿ. ಎಸ್. ಎಸ್. ಮುಖ್ಯಸ್ಥರಾದ ಮೇಲೆ ಆ ಹಿರಿಯರು ಬಳುವಳಿಯಾಗಿ ಕೊಟ್ಟಿದ್ದ ಹೂವಿನ ಕುಂಜ ಇತ್ಯಾದಿಯನ್ನು ಕನ್ನಡ ವಿಭಾಗಕ್ಕೆ ಕೊಡಲು ಹೋದೆ. ಕೊಡಲು ಮನಸ್ಸಿಲ್ಲದಿದ್ದರೂ ಕೊಟ್ಟೆ. ಯಾಕೆಂದರೆ ಅವುಗಳನ್ನು ಜೋಪಾನವಾಗಿಟ್ಟುಕೊಳ್ಳಲು ನೆಲೆಯಿರಲಿಲ್ಲ. ಕೊಡಲು ಹೋದಾಗ ಜಿ. ಎಸ್. ಎಸ್. ಬೇಡ ಅಂದರೂ ಕೊಟ್ಟೆ. ಇಂಥವರ ಮೇಲೆ ನಾನು ಸಿಡಿಮಿಡಿಗೊಂಡ ಘಟನೆ ನಡೆಯಿತು. ಆದರೆ ನಾನು ಸಿಟ್ಟುಮಾಡಿಕೊಂಡಿದ್ದಕ್ಕೆ ಅವರೇ ಕಾರಣರಾಗಿದ್ದರೂ, ಸಿಟ್ಟು ಮಾಡಿಕೊಂಡಿದ್ದ ಎಂಬುದು ಅವರಿಗೆ ಗೊತ್ತಾಗಲಿಲ್ಲ. ಹಾಗೆ ನೋಡಿದರೆ ಇಲ್ಲಿ ಬರೆಯುತ್ತಿರುವ ಯಾವ ಘಟನೆಯೂ ಅವರ ನೆನಪಿನಲ್ಲಿ ಉಳಿದಿಲ್ಲ ಅನ್ನಿಸುತ್ತೆ. ಯಾಕೆಂದರೆ ಸಾವಿರಾರು ವಿದ್ಯಾರ್ಥಿಗಳ ನಡುವೆ ಬದುಕಿಬಂದ ಯಾವ ಅಧ್ಯಾಪಕನಿಗೂ ತಮ್ಮ ವಿದ್ಯಾರ್ಥಿಗಳ ಚೇಷ್ಟೆ ಅಥವಾ ಇತರೆ ತಕರಾರುಗಳು ಸ್ವಾಭಾವಿಕವಾಗಿ ಮರೆತುಬಿಡುವ ಸಾಧ್ಯತೆ

ಹೆಚ್ಚು. ಆದರೂ ಕೆದಕಿದಾಗ ಕೆಲವು ಆ ಕ್ಷಣಕ್ಕೆ ಕಾಣಿಸಿಕೊಂಡು ಮಾಯವಾಗ ಬಹುದು.

ನಮ್ಮ ಬ್ಯಾಚ್‌ನ ವಿದ್ಯಾರ್ಥಿಗಳು ಅತ್ಯಂತ ವಿಚಿತ್ರದ ಹುಡುಗರು. ಓದಿನಲ್ಲಿ ಎಷ್ಟು ನಿಸ್ಸೀಮರೋ-ತುಂಟಾಟದಲ್ಲೂ ಅಷ್ಟೇ ನಿಸ್ಸೀಮರಾಗಿದ್ದರು. ಸರಿಯಾಗಿ ಪಾಠಮಾಡಲಾಗದ ಅಧ್ಯಾಪಕರನ್ನು ಪರೋಕ್ಷವಾಗಿ ಛೇಡಿಸುವ ವಿದ್ಯಾರ್ಥಿಗಳು ಸಾಕಷ್ಟು ಮಂದಿಯಿದ್ದರು. ಒಮ್ಮೆ ಅಧ್ಯಾಪಕರೊಬ್ಬರು 'ರಾಜಶೇಖರ ವಿಲಾಸ ಪಾಠ ಮಾಡುವಾಗ ನಾನು ಆ ಅಧ್ಯಾಪಕರಿಗೆ "ಸಾರ್, ದಿನಾ ಪ್ರತಿಪದಕ್ಕೆ ಅರ್ಥ ಹೇಳುವ ಬದಲು ಬೇರೆ ಏನಾದರೂ ಹೇಳಿ" ಎಂದೆ. ಅವರಿಗೆ ಸಾಕಷ್ಟು ಸಿಟ್ಟು ಬಂತು. ನಮಗೆ ಅವರ ಪಾಠ ಕೇಳುವುದು ಅತ್ಯಂತ ಹಿಂಸೆಯಾಗಿತ್ತು. ಇದನ್ನು ಮೂರು ವರ್ಷದಿಂದ ಅನುಭವಿಸಿದ್ದೆವು. ನನ್ನ ಈ ಮಾತನ್ನು ಕೇಳಿ ತುಂಬ ಭಾವುಕತೆಯಿಂದ ಅವರು "ನಿಮಗೆ ನವ್ಯದ ಪಿತ್ತ ನೆತ್ತಿಗೇರಿದೆ. (ಆಗ ನಾವು ಕೆಲವು ಮಂದಿ ನವ್ಯ ವನ್ನು ಎತ್ತಿ ಕುಣಿದಾಡುತ್ತಿದ್ದೆವು) ತಾಕತ್ತಿದ್ದರೆ ಪಾಠ ಮಾಡ್ಬನ್ರಿ" ಎಂದರು. ನಾನು ನಗುತ್ತಲೇ ''ಎರಡು ದಿನ ಟೈಂ ಕೊಡಿ ಸಾರ್, ನಿಮಗಿಂತ ಚೆನ್ನಾಗಿ ಪಾಠ ಮಾಡ್ತೀನಿ" ಎಂದೆ. (ಈ ಮಾತನ್ನು ಹೇಳಬಾರದಾಗಿತ್ತು ಅನ್ನಿಸುತ್ತೆ ಈಗ) ಅವರ ಕೈಯಲ್ಲಿ ತಡಕೊಳ್ಳಲು ಆಗಲಿಲ್ಲ. ಅತ್ಯಂತ ಉಗ್ರರಾಗಿದ್ದರು. ಕೆಲವು ಹುಡುಗಿ ಯರು ಅವರ ಬೈಗುಳವನ್ನು ಎದುರಿಸಲಾರದೆ ಹೋದರು. ಪರಿಸ್ಥಿತಿ ವಿಕೋಪಕ್ಕೆ ಹೋಗಿರುವುದು ಅರಿವಾಯಿತು. ಆ ಮೇಷ್ಟ್ರು ದಡದಡನೆ ಹಲಗೆಯ ವೇದಿಕೆಯಿಂದ ಕೆಳಕ್ಕಿಳಿದರು. ನೇರವಾಗಿ ತಮ್ಮ ಕೊಠಡಿಗೆ ಹೋದರು. ನವ್ಯವಿರೋಧಿ ಕೆಲವು ಹುಡುಗಿಯರ ಬೈಗುಳಕ್ಕೆ ತುತ್ತಾದೆ. ಕೊನೆಗೆ ನಮ್ಮ ಗುಂಪಿನ ಗೆಳೆಯರ ಸಲಹೆಯ ಮೇರೆಗೆ ಕ್ಷಮೆ ಕೇಳಲು ಹೋದೆವು. ಅವರು ರೂಮಿನಲ್ಲಿರಲಿಲ್ಲ. ಕಂಬಾರರ ಜೊತೆ ಯಲ್ಲಿ ಜಿ.ಎಸ್.ಎಸ್. ರವರನ್ನು ಕಾಣಲು ಹೋಗಿದ್ದರು. ಮಾರನೆಯ ದಿನ ಮಧ್ಯಾಹ್ನ ಎರಡು ಗಂಟೆಯ ತರಗತಿಯಲ್ಲಿ ನನ್ನ ಹೆಸರನ್ನು ಪ್ರಸ್ತಾಪಿಸದೆ, ಉಗ್ರ ವಾಗಿ ಮಾತಾಡಿದರು. ನಾನು ಸಿಟ್ಟಿನಿಂದ ಪ್ರತಿಭಟಿಸಲು ಎದ್ದು ನಿಂತೆ. ಮಾಧವ ರಾವ್ ಮತ್ತು ಹಿರೇಮಠ ಬಿಗಿಯಾಗಿ ಹಿಡಿದು ಕೂರಿಸಿದರು ಅನ್ನಿಸುತ್ತೆ. ಅಂತೂ ಜಿ.ಎಸ್.ಎಸ್. ರವರು ಪಂಪಭಾರತದ ಬದಲು ನಮ್ಮ ಭಾರತಕ್ಕೆ ಬಂದಿದ್ದರು. ತರಗತಿ ಮುಗಿಯಿತು. ನಾನು ಅತ್ಯಂತ ಡಿಸ್ಟರ್ಬ್ ಮಾಡಿನಲ್ಲಿದ್ದೆ. ಈ ವಿಷಯ ಗೊತ್ತಾಗಿ ಕೆ.ಎಂ.ಎಸ್. (ಮುರುಳಸಿದ್ದಪ್ಪ) ರವರು ರೂಮಿಗೆ ಕರೆಸಿ ಬೇಸರಮಾಡಿ ಕೊಳ್ಳಬೇಡಿ. ನೀವೇನು ಅಂಥ ತಪ್ಪು ಮಾಡಿಲ್ಲ ಬನ್ನಿ ಎಂದು ತಿಂಡಿತಿನ್ನಲು ಕರೆದು ಕೊಂಡು ಹೋದರು. ಆಗ ನಮಗೆ ಅಚ್ಚು ಮೆಚ್ಚಿನ ಮೇಷ್ಟ್ರೆಂದರೆ ಕೆ.ಎಂ.ಎಸ್.

ಮತ್ತು ಲಕ್ಷ್ಮೀನಾರಾಯಣಭಟ್ಟರು. ಭಟ್ಟರಷ್ಟು ಹೆಚ್ಚು ಮಾತಾಡದಿದ್ದರೂ ಮರುಳ ಸಿದ್ದಪ್ಪನವರು ನಮಗೆ ಹೊಸ ಆಲೋಚನ ಕ್ರಮವನ್ನು ಬೆಳೆಸಿದವರು. ಅದರಲ್ಲೂ ರಾಜಕೀಯ ಮತ್ತು ನಾಟಕಗಳ ಬಗ್ಗೆ ಅಭಿರುಚಿಯನ್ನು ಬೆಳೆಸಿದವರು.ಆ ದಿನಗಳಲ್ಲಿ ಕೃಷ್ಣಮೆನನ್ ಎಂದರೆ ನನಗೆ ಎಲ್ಲಿಲ್ಲದ ಅಭಿಮಾನ. ಕೃಷ್ಣಮೆನನ್‌ನ ರಾಜಕೀಯ ದಿನಗಳು ಅಸ್ತಮಿಸುತ್ತಿದ್ದರೂ ಅಭಿಮಾನದಿಂದ ಕಾಣುತ್ತಿದ್ದೆ. ಮುಂಬಯಿಯಲ್ಲಿ ಎಸ್.ಕೆ. ಪಾಟೀಲರಂಥ ಮರಾಠಿ ಹುಲಿಯನ್ನು ಎದುರಿಸಿದ್ದಕ್ಕೆ ಮತ್ತಷ್ಟು ಗೌರವ ಜಾಸ್ತಿಯಾಗಿತ್ತು. ಕೆ. ಎಂ. ಎಸ್. ರವರು ಬ್ರೆಡ್ ಬಟರ್ ಜಾಮ್‌ನ್ನು ಪರಿಚಯ ಮಾಡಿಸಿಕೊಟ್ಟರು. ಆ ದಿನಗಳು ತುಂಬ ಕಷ್ಟದ ದಿನಗಳಾಗಿದ್ದುವು. ಮನೆಯನ್ನು ತಿರಸ್ಕರಿಸಿ ಬಂದಿದ್ದರಿಂದ ಊಟಕ್ಕೆ ವಿಚಿತ್ರ ರೀತಿಯಲ್ಲಿ ಪರದಾಡಬೇಕಾಗಿತ್ತು. ಒಂದು ವಾರವಾದರೂ ಕಾಫೀಕುಡಿಯದ ದಿನಗಳು ಅವು. ಇಲ್ಲಿ ಕೋದಂಡರಾಮಶೆಟ್ಟಿ ಮತ್ತು ಕ. ನಂ. ನಾಗರಾಜ್‌ರವರನ್ನು ನೆನಪು ಮಾಡಿಕೊಳ್ಳುವುದು ಸೂಕ್ತ. ಕ. ನಂ ರವರು ಭಾರತ್ ಟೆಲಿಫೋನ್ ಕಾರ್ಖಾನೆಯಲ್ಲಿ ರಾತ್ರಿಪಾಳಿ ಕೆಲಸಮಾಡುತ್ತ ಎಂ.ಎ. ಓದುತ್ತಿದ್ದರು. ಒಳ್ಳೆಯ ಕಥೆ ಬರೆಯುತ್ತಿದ್ದರು. ಈಗ ಬರವಣಿಗೆಯ ಬಗ್ಗೆ ಸನ್ಯಾಸವನ್ನು ಸ್ವೀಕರಿಸಿದ್ದಾರೆ. ನ್ಯಾಷನಲ್ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾರೆ. ಶೆಟ್ಟರಂತೂ ಸದಾ ಸಾಹಿತ್ಯದ ಗುಂಗಿನಲ್ಲಿಯೇ ಸುತ್ತಾಡುತ್ತಿದ್ದವರು. ನನಗಿಂತ ಒಂದು ವರ್ಷ ಸೀನಿಯರ್ ವಿದ್ಯಾರ್ಥಿ, ಸಿಕ್ಕಿದಾಗಲೆಲ್ಲ ಬೈಟೂ ಕಾಫೀಗೆ ಒಂದು ಪ್ಲೇಟು ಬಜ್ಜಿಗೆ ಕೊರತೆಇರಲಿಲ್ಲ. ಈಗ ಶೆಟ್ಟರು ನಾಚಿಕೊಂಡು ಕೋದಂಡರಾಂ ಆಗಿಬಿಟ್ಟಿದ್ದಾರೆ. ಪದ್ಯ ಚೆನ್ನಾಗಿ ಬರೆಯುತ್ತಿದ್ದವರು, ಈಗ ಬರೆಯುತ್ತಿಲ್ಲ.

ಕೆ. ಎಂ. ಎಸ್. ತಿಂಡಿಕೊಡಿಸಿ ಪ್ಲಾಜಾ ಚಿತ್ರಮಂದಿರಕ್ಕೆ ಕರೆದುಕೊಂಡು ಹೋದರು. ಅಲ್ಲಿ ಮೊದಲನೆಯ ಬಾರಿಗೆ ಸತ್ಯಜಿತ್‌ರಾಯ್‌ರವರ ಚಿತ್ರಗಳ ಉತ್ಸವ ಇತ್ತು. ಅದರ ಜೊತೆಗೆ ಓಬೇರಾನ್‌ನ ಕಿರು ಚಿತ್ರಗಳ ಪ್ರದರ್ಶನ. ಈ ಸಂದರ್ಭ ದಲ್ಲಿ ಸುಮಾರು ಮುವತ್ತು-ನಲವತ್ತು ಉತ್ತಮ ಕಿರು ಚಿತ್ರಗಳನ್ನು ನೋಡಿದೆ ಅನ್ನಿಸುತ್ತೆ. ಎರಡು ಸೀಸನ್ ಟಿಕೆಟ್ಟು ಸಿಕ್ಕಿದರೂ ಬೇರೆ ಬೇರೆ ಷೋಗಳಿಗೆ ಸಿಕ್ಕಿತು. ಕೆ.ಎಂ.ಎಸ್. ರವರು ಆರು ಗಂಟೆಯ ಷೋಗೆ ಹೋದರು. ನಾನು ಒಂಬತ್ತು ಗಂಟೆಯ ಷೋಗೆ ಹೋದೆ. ಎರಡನೆಯ ದಿನ 'ಪಥೇರ್ ಪಾಂಚಾಲಿ'ಯ ಮುಂದಿನ ಭಾಗವಾದ 'ಅಪರಾಜಿತೋ' ಚಿತ್ರವನ್ನು ನೋಡಿಕೊಂಡು ಮೆಜೆಸ್ಟಿಕ್‌ನಲ್ಲಿದ್ದ ಬಂಡಿ ಶೇಷಮ್ಮ ಹಾಸ್ಟಲ್‌ಗೆ ಹೋಗಲು ಕಬ್ಬನ್ ಪಾರ್ಕಿನಲ್ಲಿ ನುಗ್ಗಿದೆ. ರಾತ್ರಿ ಹನ್ನೆರಡು ಗಂಟೆಯಾಗಿತ್ತು. ಯಾರೋ ಇಬ್ಬರು ಬಂದು ಚಿಗಿಯಾಗಿ ಹಿಡಕೊಂಡು ಕೆನ್ನೆ ಸವರ ತೊಡಗಿದರು. ನಾನು ಭಯದಿಂದ ಅವರು ಕಳ್ಳರಿರಬಹುದೆಂದು "ನನ್ನ ಹತ್ತಿರ ಏನು ಇಲ್ಲ, ದಯಮಿಟ್ಟು ಬಿಟ್ಟುಬಿಡಿ" ಎಂದೆ. (ಹೀಗೆ ಹೇಳಿದರೂ ನನ್ನ ಕೈಯಲ್ಲಿ

ನನ್ನಣ್ಣ ಮದುವೆಯಲ್ಲಿ ಕೊಂಡುಕೊಂಡಿದ್ದ ವೆಸ್ಟೆಂಡ್ ವಾಚ್ ಇತ್ತು. ನಾವು ಕಳ್ಳರಲ್ಲ" ಎಂದು ಮತ್ತೆ ಕೆನ್ನೆ ಸವರತೊಡಗಿದರು. ನನಗೆ ಗೊತ್ತಿಲ್ಲದ ಅವ್ಯಕ್ತ ಭೀತಿ ಆವರಿಸತೊಡಗಿತು. ಕಿಟ್ಟನೆ ಚೀರಿಕೊಂಡೆ. ಪ್ರೋಲೀಸರು ಸಿಳ್ಳೆ ಊದುತ್ತ ಟಾರ್ಚ್ ಬೆಳಕು ಬಿಡುತ್ತ ನನ್ನತ್ತ ಬಂದರು. ಅವರು ನನ್ನನ್ನು ಬಿಟ್ಟು ಓಡಿದರು. ವಿಷಯ ಪ್ರೋಲೀಸರಿಗೆ ತಿಳಿಸಿದೆ. ನನ್ನ ವಿಷಯವೆಲ್ಲ ಕೇಳಿ, 'ಇನ್ನು ಮುಂದೆ ಈಕಡೆ ಬರಬೇಡ, ಆ ಸೂಳೆ ಮಕ್ಕಳ ಕಾಟ ಜಾಸ್ತಿಯಾಗಿದೆ' ಎಂದು ಕರೆದುಕೊಂಡುಬಂದು ಕಸ್ತೂರಿಬಾ ರಸ್ತೆಯಲ್ಲಿ ನೇರವಾಗಿ ಹೋಗಲು ಸೂಚಿಸಿದರು. ಭೀತಿಯಿಂದಲೇ ಹಾಸ್ಟಲ್ ತಲುಪಿದೆ.

ಮೂರನೆಯ ದಿನ ಕಾಲೇಜಿಗೆ ಹೋದಾಗ ಮುರುಳಸಿದ್ಧಪ್ಪ ಅವರಿಗೆ ವಿಷಯ ತಿಳಿಸಿದೆ. 'ಹೋಮೋ'ಗಳ ಬಗ್ಗೆ ಸಾಕಷ್ಟು ಮಾಹಿತಿ ಕೊಟ್ಟರು. ಅದೇ ವಾರ ಸಲಿಂಗರತಿಗೆ ಸಂಬಂಧಿಸಿದಂತೆ ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಯ ವಾರದ ವಿಭಾಗದಲ್ಲಿ ಹುಡುಗಿಯರ ಸಲಿಂಗರತಿಯ ವಿಕೃತ ಕಾಮಕ್ಕೆ ಸಂಬಂಧಿಸಿದ ಲೇಖನವಿತ್ತು. ಓದಿ ಗಾಬರಿಯಾಯಿತು. ಈಗಲೂ ಕಬ್ಬನ್‌ಪಾರ್ಕ್ ಎಂದರೆ ವಿಕೃತ ಕಾಮಿಗಳು ನೆನಪಿಗೆ ಬರುತ್ತಾರೆ. ಈಗ ಅಲ್ಲಿ ತುಂಬಿರುವುದು ಅವರೇ. ಒಂದು ಕಾಲದಲ್ಲಿ ಹುಡುಗ-ಹುಡುಗಿಯರ ಪ್ರೀತಿಪ್ರೇಮಕ್ಕೆ ಕಬ್ಬನ್‌ಪಾರ್ಕ್ ನೆಲೆಯಾಗಿತ್ತು.

ಸತ್ಯಜಿತ್‌ರಾಯ್‌ರವರ ಚಿತ್ರಗಳ ಸಪ್ತಾಹ ಮುಗಿಯಿತು. ಹೊಸ ಚಿತ್ರಗಳ ಬಗ್ಗೆ ವ್ಯಾಮೋಹ ಬೆಳೆಸಿಕೊಂಡೆ. ಗೊದಾರ್ಡ್, ಡಿಸಿಕಾ, ಮಣಿಕೌಲ್, ಋತ್ವಿಕ್ ಘಟಕ್ ಪ್ರಿಯರಾದರು. ವಾರಕ್ಕೆ ನಾಲ್ಕೈದು ಚಿತ್ರಗಳು ನೋಡತೊಡಗಿದೆ. ಪ್ರತಿ ಗುರುವಾರ ಫ್ರೆಂಚ್ ಸಾಂಸ್ಕೃತಿಕ ಕೇಂದ್ರಕ್ಕೆ ಹೋಗುತ್ತಿದ್ದೆ. ಅಲ್ಲಿ ಸಂಜೆ ಒಳ್ಳೆಯ ಚಲನಚಿತ್ರ ತೋರಿಸುತ್ತಿದ್ದರು. ನನ್ನ ಹಾಗೆ ಬರುತ್ತಿದ್ದ ಒಬ್ಬ ಹುಡುಗಿಯನ್ನು ಗುಟ್ಟಾಗಿ ಪ್ರೀತಿಸಿದೆ. ಮೂರು ವರ್ಷಗಳ ಅವಧಿಯಲ್ಲಿ ಒಮ್ಮೆಯೂ ಆ ಹುಡುಗಿಯನ್ನು ಮಾತಾಡಿಸುವ ಧೈರ್ಯ ವಹಿಸಲಿಲ್ಲ. ಈಗ ಎಲ್ಲಿದ್ದಾಳೋ ಗೊತ್ತಿಲ್ಲ.

'ರಾಜಶೇಖರ ವಿಲಾಸ'ದ ಪ್ರಕರಣ ಇನ್ನೂ ಬಿಸಿಯಾಗಿಯೇ ಇತ್ತು. ನನ್ನ ಕೆಲವು ಗೆಳೆಯರು ಜಿ.ಎಸ್.ಎಸ್‌ಗೆ ಕ್ಷಮಾಪಣೆಯ ಪತ್ರ ಬರೆದುಕೊಡಲು ಹೇಳಿದರು. ಕೊನೆಯ ವರ್ಷ ಬೇರೆ ಎಂಬ ಭಯವನ್ನು ಸೃಷ್ಟಿಸಿದರು. ಫೇಲ್ ಮಾಡುತ್ತಾರೆ ಎಂಬ ಕೆಟ್ಟ ಸುದ್ದಿಯನ್ನು ಕಿವಿಗೆ ಹಾಕಿದರು. ಅದನ್ನು ನಂಬದಿದ್ದರೂ ಅವರ ಗುಮ್ಮ ಬೆಳೆಯುತ್ತಾ ಹೋಯಿತು. ಇನ್ನೂ ಕೆಲವರು ಕ್ಷಮಾಪಣೆ ಪತ್ರ [illegible] [illegible]. ಅದರ ಬಗ್ಗೆ ಹೆಚ್ಚು ತಲೆಕೆಡಿಸಿಕೊಳ್ಳದೆ ಕೊಟ್ಟುಬಿಡು ಎಂದರು.

ಕೊಡುವ ಸಮಯಕ್ಕೆ ಇಬ್ಬರು ಹುಡುಗಿಯರು ಪ್ರತಿಭಟಿಸಿದರು. (ಅವರು ನಮ್ಮ ಮಾವಳ್ಳಿ ಗುಂಪಿನ ಹುಡುಗಿಯರಲ್ಲ) ಪತ್ರಕೊಡಲು ಹೋದೆ. ಜಿ. ಎಸ್. ಎಸ್. 'ಏನು ?' ಎಂದರು. ವಿಷಯ ತಿಳಿಸಿದೆ. 'ಆರೀತಿ ಮಾಡಬಾರದು' ಎಂದು ಹೇಳಿ ಪತ್ರ ತೆಗೆದುಕೊಂಡರು. ಹೊರಗೆ ಬಂದೆ. ಮರುಳಸಿದ್ದಪ್ಪನವರಿಗೆ ಗೊತ್ತಾಗಿ ಹೀಗ್ಯಾಕೆ ಮಾಡಿದಿರಿ ಎಂದರು. ನಾನು ಉತ್ತರಿಸಲಿಲ್ಲ. ಆದರೆ ಇದರಿಂದ ನನಗೆ ಆದ ಅನ್ಯಾಯವೆಂದರೆ ಆ ಇಬ್ಬರು ಅಭಿಮಾನದ ಹುಡುಗಿಯರನ್ನು ಶಾಶ್ವತವಾಗಿ ಕಳೆದುಕೊಂಡೆ. ಇದರ ನಂತರ ನನಗೆ ಎಂದೂ ಅವರು ಮನೆಯಿಂದ ಊಟ ತಂದುಕೊಡಲಿಲ್ಲ. ನನಗೆ ಪ್ರಿಯವಾದ ಮುದ್ದೆ ಊಟವನ್ನು ಕಳೆದುಕೊಂಡೆ. ಹಾಗೆಯೇ ಇದರ ಸುತ್ತ ವಿಚಿತ್ರ ಭಾವುಕ ಘಟನೆಗಳೆಲ್ಲ ನಡೆದುಹೋದುವು. ಈಗ ನೆನಪು ಮಾಡಿಕೊಳ್ಳಲು ಆಗದಂತಹವು.

ಪತ್ರಕೊಟ್ಟು ತಪ್ಪುಮಾಡಿದೆ ಅನ್ನಿಸುತ್ತಿರುವಾಗಲೇ ಸಂಜೆ ನಾಲ್ಕರ ಸಮಯ. ಜಿ.ಎಸ್.ಎಸ್. ರವರಿಂದ ಕರೆಬಂತು. ಆಗ ಗೆಳೆಯರೆಲ್ಲ ಮುದ್ದಾದ ಹುಲ್ಲಿನ ಮೇಲೆ ಕೂತು ಶಾಂತಿನಾಥದೇಸಾಯಿಯವರ 'ಮುಕ್ತಿ' ಅಥವಾ ಅನಂತಮೂರ್ತಿಯವರ 'ಸಂಸ್ಕಾರ'ಕ್ಕೆ ಸಂಬಂಧಿಸಿದಂತೆ ಚರ್ಚಿಸುತ್ತಿದ್ದೆವು ಅನ್ನಿಸುತ್ತೆ. ಕರೆಗೆ ಎಲ್ಲರೂ ಅಲರ್ಟ್ ಆದರು. ಎದ್ದು ಹೋಗುವಾಗ ಮಾಧವರಾವ್ ಏನೂ ಮಾತಾಡದೆ ಸುಮ್ನೆ ಬಾರೋ ಎಂದದ್ದು ನೆನಪಿದೆ. ಆ ದಿನಗಳಲ್ಲಿ ಮಾಧವರಾವ್ ಆತ್ಮೀಯ ಗೆಳೆಯನಾಗಿದ್ದ. ಎಂದಾದರೂ ಕಾಫೀ ಮತ್ತು ಕಾಲಿದೋಸೆ ಕೊಡಿಸುತ್ತಿದ್ದ. ಇವನ ಜೊತೆಯಲ್ಲಿ ಹೋಗುವಾಗ ಹೆಗಲಿನ ಮೇಲೆ ಕೈಹಾಕಿ ನೇತಾಡುವುದನ್ನು ಸಹಿಸಿಕೊಳ್ಳಬೇಕಾಗಿತ್ತು. ಈ ನೇತಾಟ ರಾಘವೇಂದ್ರರಾವ್‌ಗೆ ಜಾಸ್ತಿ. ಆದರೆ ಈಗ ಇವರು ಒಂದು ಅಮೂಲ್ಯ ನೆನಪು.

ಸಂಕೋಚ ಮತ್ತು ಭಯದಿಂದಲೇ ಪ್ರೊಫೆಸರ್‌ರವರ ಕೊಠಡಿಯನ್ನು ಪ್ರವೇಶಿಸಿದೆ. ಕೂತುಕೊಳ್ಳಲು ಹೇಳಿದರು. ಕಾಫೀ ಕೊಟ್ಟರೆಂದು ಕಾಣುತ್ತೆ. ನೀವು ಒಂದು ವಾರ ನಮ್ಮ ಮನೆಯಲ್ಲಿರಬೇಕು. ನಾವೆಲ್ಲ ದೂರ ಹೋಗ್ತಿದ್ದೀವಿ. ನಿಮಗೆ ಬೇಕಾದ್ದು ಮಾಡಿಕೊಂಡು ತಿನ್ನಿ. ಬೇಕಾದ ಪುಸ್ತಕ ಓದಿ. ಯಾವುದಕ್ಕೂ ಸಂಕೋಚ ಬೇಡ ಎಂದರು. ಆಗಲಿ ಎಂದು ಹೊರಗೆ ಬಂದೆ. ಎಲ್ಲರೂ ಕುತೂಹಲದಿಂದ ಕಾಯುತ್ತಿದ್ದರು. ವಿಷಯ ತಿಳಿಸಿದೆ. ಸಂತೋಷದ ಉಸಿರು ಬಿಟ್ಟರು.

ಪ್ರೊ. ಜಿ.ಎಸ್.ಎಸ್. ಟೂರ್ ಹೋಗುವುದಕ್ಕೆ ಹಿಂದಿನ ದಿನ ಮನೆಗೆ ಹೋದೆ. ಜಿ.ಎಸ್.ಎಸ್. ಮತ್ತು ಕೆ.ಎಂ.ಎಸ್. ಇದ್ದರು. ಕೆ.ಎಂ.ಎಸ್.ಗೆ ಇನ್ನೂ ಮದುವೆಯಾಗಿರಲಿಲ್ಲ. ಜಿ.ಎಸ್.ಎಸ್.ರವರ ಮಗಳು ಜಯಂತಿಯವರನ್ನು ಮದುವೆ

ಯಾಗುವ ವಿಷಯ ನನಗೆ ಗೊತ್ತಿರಲಿಲ್ಲ. ಸ್ವಲ್ಪ ಸಮಯದ ನಂತರ ಜಿ.ಎಸ್.ಎಸ್. ರವರ ಪತ್ನಿ ನನ್ನನ್ನು ಕರೆದು "ನೋಡಿ ಶ್ರೀನಿವಾಸ್, ಇಲ್ಲಿ ಬೋರ್ನ್‌ವೀಟಾ ಇದೆ. ಇಲ್ಲಿ ಹಾರ್ಲಿಕ್ಸ್ ಇದೆ, ಹೀಗೆ ಒಂದೊಂದನ್ನೇ ತೋರಿಸುತ್ತ ಬಂದು ನಿಮಗೆ ಬೇಕಾದ್ದನ್ನು ಮಾಡಿಕೊಂಡು ತಿನ್ನಿ" ಎಂದರು. ನಾನು ಒಪ್ಪಿಕೊಂಡು ಹೊರಗೆ ಬಂದೆ. ಕೆ ಎಂ.ಎಸ್. ಗಾಂಧೀಬಜಾರ್‌ತನಕ ನನ್ನೊಡನೆ ಬಂದರು. ಮತ್ತೆ ಅವರು ಲಂಕೇಶ್ ರವರ ಮನೆಗೆ ಹೋದರೆಂದು ಕಾಣುತ್ತೆ. ನಾನು ಮೆಜೆಸ್ಟಿಕ್‌ಗೆ ಹೋದೆ.

ಜಿ.ಎಸ್.ಎಸ್.ರವರ ಮನೆ ಆಗ ಬಾಡಿಗೆ ಮನೆಯಾಗಿತ್ತು. ಆ ದೊಡ್ಡ ಮನೆಯಲ್ಲಿ ನಾನೊಬ್ಬನೆ. ಇದಕ್ಕಿಂತ ದೊಡ್ಡಮನೆಯಿಂದ ಬಂದಿದ್ದರೂ ಕಳೆದ ನಾಲ್ಕೈದು ವರ್ಷಗಳಿಂದ ಇಂಥ ಮನೆಗಳು ಪರಿಚಯವಿಲ್ಲದಂತೆ ಬದುಕಿದ್ದೆ. ಮಹಡಿ ಮನೆಯಾಗಿದ್ದರಿಂದ ಚೆನ್ನಾಗಿ ಗಾಳಿ ಬರುತ್ತಿತ್ತು. ಮುಂದೆ ಹನುಮಂತರಾಯನ ಗುಡ್ಡವಿತ್ತು. ಬಲಗಡೆ ರಾಮಕೃಷ್ಣಾಶ್ರಮದ ಹಾಸ್ಟಲ್‌ನ ಹಸಿರು ತುಂಬಿದ ಮರಗಳು ಇದ್ದುವು. ಹೇಗೋ ಅಂದು ರಾತ್ರಿಯನ್ನು ಕಳೆದೆ. ಮಾರನೆಯ ದಿನ ಬೆಳಿಗ್ಗೆ ಬಾಗಿಲಿನ ಕರೆಘಂಟೆ ಬಾರಿಸಿತು. ಬಾಗಿಲು ತೆಗೆದೆ. ವಯಸ್ಸಿಗೆ ಬಂದ ಹುಡುಗಿಯೊಬ್ಬಳು ಹಾಲಿನ ಪಾತ್ರೆಯನ್ನು ಹಿಡಿದಿದ್ದಳು. ಹಾಲನ್ನು ತಗೊಂಡು ಹಾಲಿನ ಪಾತ್ರೆಯನ್ನು ವಾಪಸ್ಸು ಕೊಟ್ಟೆ. ಮಾರನೆಯ ದಿನ ಅದೇ ಸಮಯಕ್ಕೆ ಘಂಟೆ ಬಾರಿಸಿತು. ಬಾಗಿಲು ತೆಗೆದೆ. ಆ ಹುಡುಗಿಯು ಬರುವ ಬದಲು ಅವಳ ತಾಯಿ ಬಂದಿದ್ದಳು. ಆಕೆ "ನಿಮ್ಮನ್ನು ನೋಡಿ ನನ್ನ ಮಗಳು ಬರಲು ಭಯಪಟ್ಟಳು. ಆದ್ದರಿಂದ ನಾನೇ ಬಂದೆ" ಎಂದು ಹೋದಳು. ಒಂದು ಕ್ಷಣ ಸ್ಟುಪಿಡ್ ಹೆಂಗಸರು ಅಂದು ಸುಮ್ಮನಾದೆ. ಮಾರನೆಯ ದಿನ ಸಿಟ್ಟಿನಿಂದ ಬೈಯುವ ಅನ್ನಿಸಿತು. ಅವರಿಂದ ಮತ್ತೇನಾದರೂ ಅನಾಹುತ ಆದೀತು ಅನ್ನಿಸಿ ಸುಮ್ಮನಾದೆ.

ಐದಾರು ದಿನಗಳ ನಂತರ ಪ್ರವಾಸದಿಂದ ಕೆ.ಎಂ.ಎಸ್. ಬಂದರು. ಒಂದಷ್ಟು ಅನ್ನಸಾರು ಮಾಡಿ ಊಟಮಾಡಿದೆವು. ಆಗ ಹಾಲಿನಮ್ಮನ ವಿಷಯ ತಿಳಿಸಿದೆ. 'ಇರಲಿ ಬಿಡಿ ಅದಕ್ಕೇಕೆ ತಲೆಕೆಡಿಸಿಕೊಳ್ತೀರಿ' ಎಂದರು ನಗುತ್ತ. ಸಂಕೋಚದಿಂದಲೇ ಸ್ವೀಕರಿಸಿದೆ ಆ ಮಾತನ್ನು. ಜಿ. ಎಸ್. ಎಸ್. ರವರ ಸಂಸಾರ ಬಂತು. ಮನೆಯನ್ನು ಒಪ್ಪಿಸಿ ಹೊರಗೆ ಬರುವ ಮುನ್ನ ಶ್ರೀಮತಿ ಜಿ. ಎಸ್. ಎಸ್‌ರವರು ಒಳ್ಳೆಯ ಅಡಿಗೆಯನ್ನು ಮಾಡಿ ಒಟ್ಟಿಗೆ ಎಲ್ಲರಿಗೂ ಬಡಿಸಿದರು. ಸದಾ ಗಬ ಗಬ ತಿನ್ನುವ ನಾನು ನಿಧಾನವಾಗಿ ತಿನ್ನತೊಡಗಿದೆ. ಮಧ್ಯೆ ಮಾತುಕತೆ ಸಾಗಿತ್ತು. ಆ ಎಲ್ಲ ಮಾತುಗಳು ಅವರ ಪ್ರವಾಸಕ್ಕೆ ಸಂಬಂಧಿಸಿದವು. ಆದ್ದರಿಂದ ಪರಕೀಯನಾಗಿಯೇ ಅಭಿಮಾನದ ಆ ಮನೆಯನ್ನು ಬಿಟ್ಟು ಹೊರಗೆ ಬಂದೆ. ಬರುವಾಗ ಹಾಲಿನ ಹುಡುಗಿ ಕಣ್ಣಿಗೆ

# ಸಣ್ಣ ಉಳಿತಾಯ ಖಾತೆಯಿಂದ ಲಕ್ಷಾಧೀಶರಾಗುವ ಅವಕಾಶ

ಅಂಚೆ ಕಛೇರಿಯಲ್ಲಿ ತೆರೆದ ಉಳಿತಾಯ ಖಾತೆಗಳಲ್ಲಿ ಕನಿಷ್ಠ ದರ.200ನ್ನು ಠೇವಣಿ ಇಟ್ಟುಕೊಂಡಿದ್ದಲ್ಲಿ ಸಾಲಿಯಾನ ಶೇಕಡಾ 5.5 ಬಡ್ಡಿ ದೊರೆಯುವುದಲ್ಲದೆ 30 ಲಕ್ಷ ರೂಪಾಯಿಗಳಿಗೂ ಮೀರಿದ 22,000ಕ್ಕೂ ಹೆಚ್ಚಿನ ಸಂಖ್ಯೆಗಳ ಬಹುಮಾನಗಳು ಪ್ರತಿ ಆರು ತಿಂಗಳಿಗೊಮ್ಮೆ ಲಭ್ಯವಾಗುವುದು. ಬಹುಮಾನಗಳು ಹೀಗಿವೆ :

ಮೊದಲನೇ ಬಹುಮಾನ. ಒಂದು ಲಕ್ಷ ರೂಪಾಯಿಗಳು

| | | |
|---|---|---|
| 2ನೇ ಬಹುಮಾನ ರೂ. | 50,000 | ಐದು ಖಾತೆಗಳಿಗೆ |
| 3ನೇ ಬಹುಮಾನ ರೂ. | 20,000 | ಹತ್ತು ಖಾತೆಗಳಿಗೆ |
| 4ನೇ ಬಹುಮಾನ ರೂ. | 5,000 | 100 ಖಾತೆಗಳಿಗೆ |
| 5ನೇ ಬಹುಮಾನ ರೂ. | 500 | 2,000 ಖಾತೆಗಳಿಗೆ |
| 6ನೇ ಬಹುಮಾನ ರೂ. | 50 | 20,000 ಖಾತೆಗಳಿಗೆ |

ಇಂಥ ಖಾತೆಗಳಲ್ಲಿ ವೈಯಕ್ತಿಕವಾಗಿ ರೂ. 25,000 ವರೆಗೆ ಹಾಗೂ ಜಂಟಿಯಾಗಿ ರೂ. 50.000 ವರೆಗೆ ಹಣ ತೊಡಗಿಸಬಹುದು. ಕನಿಷ್ಠ ರೂ.200 ಠೇವಣಿಯು ಏಪ್ರಿಲ್‌ನಿಂದ ಸೆಪ್ಟಂಬರ್‌ರವರೆಗೆ ಹಾಗೂ ಅಕ್ಟೋಬರ್‌ನಿಂದ ಮಾರ್ಚಿ ಅಂತ್ಯದವರೆಗೆ ಇದ್ದ ಖಾತೆಗಳು ಆರು ತಿಂಗಳಿಗೊಮ್ಮೆ ಡ್ರಾದಲ್ಲಿ ಭಾಗವಹಿಸುವುವು. ಒಂದು ಅಂಚೆ ಕಛೇರಿಯಲ್ಲಿ ಒಂದರಂತೆ ನಿಮಗಿಷ್ಟ ಬಂದಷ್ಟು ಖಾತೆಗಳನ್ನು ಬೇರೆ ಬೇರೆ ಕಡೆಗೆ ತೆರೆದು ಬಹುಮಾನದ ಅವಕಾಶ ಹೆಚ್ಚಿಸಿಕೊಳ್ಳಬಹುದು.

ನಮ್ಮ ರಾಜ್ಯದಲ್ಲಿ ಇಂತಹ ಉಳಿತಾಯ ಖಾತೆಗಳನ್ನು ಪಡೆಯುವ ಆಂದೋಲನ ಕೈಗೊಂಡಿದೆ. ತಾವು ಹತ್ತಿರದ ಅಂಚೆ ಕಛೇರಿಯನ್ನು ಸಂದರ್ಶಿಸಿ ಖಾತೆಗಳನ್ನು ತೆರೆಯಬಹುದು ಅಥವಾ ಸಣ್ಣ ಉಳಿತಾಯದ ಅಧಿಕಾರಿಗಳು/ಕಾರ್ಯಕರ್ತರು ತಮ್ಮನ್ನು ಸಂಪರ್ಕಿಸಿದಾಗ, ತಮ್ಮ ಹಾಗೂ ತಮ್ಮ ಕುಟುಂಬದವರ ಹೆಸರಿನಲ್ಲಿ ಖಾತೆ ತೆರೆದು, ಸೌಭಾಗ್ಯವಂತರಾಗಲು ಮರೆಯಬೇಡಿರಿ.

'ಸಣ್ಣ ಉಳಿತಾಯ ಕಣ್ಣು ಕೋರೈಸುವ ಆದಾಯ'
'ಸಣ್ಣ ಉಳಿತಾಯ ಖಾತೆಯಿಂದ ಬಹುಮಾನ ಬಂದರೂ
ಲಾಭ ; ಬರದಿದ್ದರೂ 11 ರೂಪಾಯಿ ಲಾಭ ಗಟ್ಟಿ'

ಇದರಿಂದ ತಮಗೂ ಲಾಭ ದೇಶಕ್ಕೂ ಲಾಭ
ಈ ವಿಶೇಷ ಆಂದೋಲನಕ್ಕೆ ಸಹಕಾರ ನೀಡಿ.

'ಕರ್ನಾಟಕ ವಾರ್ತೆ'

ಬಿದ್ದಳು. ಮತ್ತೆ ಎಂದೂ ಕಾಣಿಸಲಿಲ್ಲ. ಕಾಣಿಸಿದ್ದರೆ ಕುತೂಹಲಕ್ಕಾದರೂ ಮಾತಾಡಿಸಿ ಬೈಸಿಕೊಂಡು ಖುಷಿಪಡಬಹುದಾಗಿತ್ತು.

ಜಿ.ಎಸ್.ಎಸ್.ರವರ ವ್ಯಕ್ತಿತ್ವದ ಸುತ್ತ ನಾನಾ ಮಾತುಗಳನ್ನು ಹೇಳುವಾಗಲೂ ಅವರು ಹೇಗೆ ಅವರ ವ್ಯಕ್ತಿತ್ವಕ್ಕೊಗ್ಗದ ಜನರನ್ನು ಸ್ವೀಕರಿಸುತ್ತ ಹೋಗುತ್ತಾರೆಂಬುದು ದನ್ನು ನೋಡಿದ್ದೇನೆ. ಒಂದು ದೃಷ್ಟಿಯಿಂದ ಜೀವನದ ಏರುತಗ್ಗುಗಳಲ್ಲಿ ಇದು ಸ್ವಾಭಾವಿಕವಿದ್ದರೂ ಲೆಕ್ಕಾಚಾರವಿಲ್ಲದೆ ಮಾತಾಡಿರ್ತಾರೆ. ಒಂದು ಸಂಜೆ ಕಿ, ರಂ ನಾಗರಾಜ್‌ರವರು ಪ್ರಜಾವಾಣಿಯಲ್ಲಿ ಪ್ರಕಟವಾಗಿದ್ದ ಅಡಿಗರ "ವರ್ಧಮಾನ" ಪದ್ಯವನ್ನು ಕುರಿತು ಮಾತಾಡಿದರು. ಆಗ ಎಂ ಎ. ಮತ್ತು ಆನರ್ಸ್ ವಿದ್ಯಾರ್ಥಿಗಳೂ ಇದ್ದರು. ಕಿ. ರಂ. ರವರ ಮಾತಿನ ನಂತರ ಜಿ.ಎಸ್.ಎಸ್. 'ನಿಮಗಿಂತ ಕವನಕ್ಕೆ ಚಿತ್ರ ಬರೆದಿರುವ ಕಾರ್ಟೂನ್ ಮೂರ್ತಿಯವರು ಪದ್ಯವನ್ನು ಹೆಚ್ಚು ಅರ್ಥಮಾಡಿಕೊಂಡಿದ್ದಾರೆ" ಎಂದಾಗ ಕಿ. ರಂ. ರಿವೋಲ್ಟ್ ಆಗಿ ಹೊರಗೆಬಂದರು. ನಾವೆಲ್ಲ ಇಬ್ಬರನ್ನೂ ಇಷ್ಟಪಡುತ್ತಿದ್ದುದರಿಂದ ಯಾರ ಪಕ್ಷವನ್ನೂ ವಹಿಸಲಾಗದೆ ಮೌನಿಗಳಾಗಿದ್ದೆವು. ಕೊನೆಗೆ ಆ ಗೊಂದಲ ಹೇಗೆ ಮುಗಿಯಿತು ಎಂಬುದು ಗೊತ್ತಿಲ್ಲ. ಆದರೆ ಕಿ. ರಂ. ರವರು ಪ್ರತಿಭಾನ್ವಿತ ಅಧ್ಯಾಪಕರೆಂಬುದು ಗೊತ್ತಿದ್ದರಿಂದ ನ್ಯಾಷನಲ್ ಕಾಲೇಜಿನಿಂದ ವಿಶ್ವವಿದ್ಯಾನಿಲಯಕ್ಕೆ ಜಿ.ಎಸ್.ಎಸ್. ಬರಮಾಡಿಕೊಂಡರು.

ಎಂ.ಎ. ಮತ್ತು ಆನರ್ಸ್ ವಿದ್ಯಾರ್ಥಿಗಳು ಪ್ರವಾಸ ಹೋಗಿ ವಾಪಸ್ಸು ಬಂದ ಮೇಲೆ ಜಿ.ಎಸ್.ಎಸ್. ತಮ್ಮ ಚೇಂಬರಿಗೆ ನನ್ನನ್ನು ಕರೆಸಿದರು. ಹೋದೆ. ಅಲ್ಲಿ ಚಿದಾನಂದ ಮೂರ್ತಿಯವರೂ ಇದ್ದರು. 'ಸಾರ್. ಶ್ರೀನಿವಾಸ್‌ರವರನ್ನು ನಮ್ಮಿಂದ ಕೆಲವು ಬಾರಿ ಕಂಟ್ರೋಲ್ ಮಾಡಲು ಆಗಲಿಲ್ಲ' ಎಂದರು. ನಾನು ಭಯದಿಂದ ಪ್ರೊಫೆಸರ್ ಬೈಯ್ಯಬಹುದೆಂದು ನಿಂತಿದ್ದೆ. "ಇನ್ನೇನು ಕ್ರಾಂತಿ ಮಾಡಿದಿರಿ?'' ಎಂದರು. "ಏನೂ ಇಲ್ಲ ಸಾರ್" ಎಂದೆ. "ಯಾಕೆ ಹೋದ್ರಿ?'' ಎಂದರು ನಗುತ್ತ. ಸುಮ್ಮನಿದ್ದೆ. ಚಿ. ಮೂ. ಸುಮ್ಮನೆ ಕುಳಿತಿದ್ದರು. ಕೊನೆಗೆ 'ಹೋಗಿ' ಎಂದರು. ಪ್ರವಾಸದಲ್ಲಿ ಒಂದಷ್ಟು ಚಿಲ್ಲರೆ ತುಂಟಾಟದ ಕೆಲಸಗಳಲ್ಲಿ ಮುಖ್ಯವಾಗಿ ಚಿದಾನಂದ ಮೂರ್ತಿಯವರನ್ನು ಸಿಟ್ಟಿಗೆಬ್ಬಿಸಿದ್ದೆ. ತುಂಗಭದ್ರಾ ಡ್ಯಾಮ್‌ನ ದಡದಲ್ಲಿ ಬಿದಿರಿನ ತಟ್ಟಿಗಳಲ್ಲಿ ಕೂತು ನೀರಿನಲ್ಲಿ ತೇಲಲು ಹೋಗಿದ್ದು, ನನ್ನನ್ನು ಬಿಟ್ಟು ಎಲ್ಲರೂ ಹೊರಟುಹೋದರು ಬಸ್ಸಿನ ಸಮೇತ. ಆದರೆ ಅತ್ಯಂತ ಗಾಬರಿ ಮನುಷ್ಯರಾದ ಚಿದಾನಂದ ಮೂರ್ತಿಯವರು ಮತ್ತೆ ವಾಪಸ್ಸು ಬಸ್ಸನ್ನು ತಂದರು. ಅಷ್ಟರಲ್ಲಿ ನನ್ನ ಅರೆಬರೆ ಜಲಕ್ರೀಡೆ ಮುಗಿದಿತ್ತು.

ಒಕ್ಕೂಟದಿಂದ ಚಿ ಪಿ. ಚಳುವಳಿಯವರೆವಿಗೆ ಇವರ ಕೆಲವು ಆತ್ಮೀಯ ಸಂಬಂಧಗಳನ್ನು ನೆನಪು ಮಾಡಿಕೊಂಡರೆ 'ಹಾಯ್' ಅನ್ನಿಸುತ್ತೆ. ಈ ಕಾರಣಕ್ಕಾಗಿಯೇ

ಬೆಂಗಳೂರಿನ ಕನ್ನಡ ವಿಭಾಗ ಒಂದಷ್ಟು ಪ್ರತಿಭಾಶೀಲಗಳನ್ನು ಪಡೆದು ಬೆಳೆಯಲು ಸಾಧ್ಯವಾಗಿದ್ದು. ಒಕ್ಕೂಟದ ಅಧ್ಯಕ್ಷರಾಗಿ ಇವರು ವಾಸ್ತವಿಕವಾಗಿ ಮಾನಸಿಕ ಹಿಂಸೆಯನ್ನು ಅನುಭವಿಸಿದರು. ವಾಚಕರ ವಾಣಿಯಲ್ಲಿ ಅಸಂಬದ್ಧ ಪತ್ರಗಳಲ್ಲಿ ಪ್ರಕಟವಾಯಿತು. ಇವಕ್ಕೆಲ್ಲ ಜಿ.ಎಸ್.ಎಸ್. ತುಂಬ ಬ್ರಾಹ್ಮಣ ವಿರೋಧಿ ಎಂದು ಹೆಸರು ಕೊಟ್ಟರು. ಈ ದೃಷ್ಟಿಯಿಂದ ಸರಹಳ್ಳಿ ಬಾಲಸುಬ್ರಹ್ಮಣ್ಯನಂಥ ಸಜ್ಜನ ವಿಮರ್ಶಕನನ್ನು ಅಡ್ಡದಾರಿಗೆಳೆದರು. ಇನ್ನೊಂದು ಹಂತದಲ್ಲಿ ಭರತಾದ್ರಿ ಎಂಬ ವೀರಶೈವ ಹುಡುಗ ಕೆಲಸ ಕೊಡದ್ದಕ್ಕೆ ಒಮ್ಮೆ ಜಿ. ಎಸ್. ಎಸ್. ರವರನ್ನು ಬೈದಾಗ "ನಿಮಗೆ ನನ್ನ ಸ್ಥಾನಮಾನ ಗೊತ್ತಾಗೊಲ್ಲ ಸುಮ್ಮನಿರಿ" ಎಂದು ತಾಳ್ಮೆಯಿಂದ ಹೇಳಿದಾಗ ಆಶ್ಚರ್ಯವಾಗಿತ್ತು. ಈಗ ಭರತಾದ್ರಿ ತುಂಬ ಬೆಳೆದಿರುವುದರಿಂದ, ಅತ್ಯಂತ ನಿರ್ಮಲ ಮನಸ್ಸಿನವನಾದ್ದರಿಂದ 'ಹೌದಮ್ಮ ಶೂದ್ರ ಅಂದು ನನ್ನ ನಡವಳಿಕೆ ಅಸಹ್ಯ ತರಿಸುವಂಥದ್ದು ಆ ಚಿದಾನಂದ ಮೂರ್ತಿ ಫ್ಯಾಸಿಸ್ಟ್ ಕಣೋ ಅವರ ಬಗ್ಗೆ ಒಂದು ಲೇಖನ ಬರೆದು ಕೊಡ್ತೀನಿ ಧೈರ್ಯವಿದ್ದರೆ ಪ್ರಕಟಿಸೋ" ಎಂದು ಮತ್ತೊಂದು ಎಕ್ಸ್‌ಟ್ರೀಮಿಟೀಗೆ ಹೋಗುವುದನ್ನು ಕಂಡಾಗ ಎಲ್ಲಾ ಕಾಲದಲ್ಲಿಯೂ ಇದು ಇಲ್ಲದೇ ಇದ್ದರೆ ನಮ್ಮ ಸಂಬಂಧಗಳೇ ಬರಡು ಅನ್ನಿಸಿಬಿಡುತ್ತೆ. ನಮ್ಮ ಜೀವನದ ಪ್ರವಾಹದಲ್ಲಿ ಜಿ.ಎಸ್.ಎಸ್ ಯಾಕೆ ಪ್ರಬುದ್ಧರಾಗಿ ಕಾಣುತ್ತಾರೆಂದರೆ; ಅವರ ಹತ್ತಿರ ಪುಟ್ಟ ಮಗುವಿಗೂ ಸಂವಾದ ಸಾಧ್ಯ. ನಾನು ಅವರ ವಿದ್ಯಾರ್ಥಿ ಎಂಬುದನ್ನು ಮರೆತು ಸಲಹೆ ಕೊಟ್ಟಿದ್ದೇನೆ. ಅದನ್ನು ಎಂದೂ ಅವರು ಕೆಟ್ಟದಾಗಿ ತಗೊಂಡಿಲ್ಲ. ಸ್ನೇಹಸಂಬಂಧದಲ್ಲಿ ಹಿರಿಯ ಕಿರಿಯ ಎಂಬ ತಾರತಮ್ಯವನ್ನು ಕಾಣದ ವ್ಯಕ್ತಿತ್ವಕ್ಕೆ ಮಣಿದಿದ್ದೇನೆ. ಕುವೆಂಪುರವರನ್ನು ಇವರು ಪ್ರೀತಿಸಿದಷ್ಟು ಮತ್ಯಾರೂ ಪ್ರೀತಿಸಿರಲಾರರು. ಆದರೆ ಇದು ಯಾವುದೇ ರೀತಿಯ ಸವಲತ್ತನ್ನು ಪಡೆಯುವುದಕ್ಕಲ್ಲ.

ಜಿ.ಎಸ್.ಎಸ್. ರವರಿಗೆ ಅರವತ್ತು ವರ್ಷ ತುಂಬಿದೆ. ತುಂಬುವ ಸಮಯದಲ್ಲಿ ತೀವ್ರ ರೀತಿಯ ಅನಾರೋಗ್ಯಕ್ಕೆ ತುತ್ತಾದರು. ಅದರಿಂದ ಚೇತರಿಸಿಕೊಂಡಿದ್ದಾರೆ. ಮತ್ತೆ ಅದೇ ಹಿಂದಿನ ರೀತಿಯ ನಡಿಗೆ ಬಂದಿದೆ. ತಮ್ಮ ಕಾವ್ಯವನ್ನು ಇಷ್ಟಪಡುವ ಮತ್ತು ಇಷ್ಟ ಪಡದವರ ನಡುವೆ ನಗುತ್ತಿರಲು ಪ್ರಯತ್ನಿಸುತ್ತಾರೆ. ಒಳಗೆ ನೋವಿದ್ದರೂ ಮುಚ್ಚಿಟ್ಟುಕೊಳ್ಳಲು ಪ್ರಯತ್ನಿಸಿ ಸೋಲುವುದುಂಟು-ಗೆಲ್ಲುವುದುಂಟು. ಇದೆಲ್ಲ ಎಂಥ ಪ್ರಬುದ್ಧ ಮನಸ್ಸಿನಲ್ಲಿಯೂ ಇರತಕ್ಕದ್ದೆ. ಬಡತನ_ಸೋಲು_ಗೆಲುವು ಒಬ್ಬ ವ್ಯಕ್ತಿಯ ಹಾದಿಯಲ್ಲಿ ಬಂದು ಹೋದಾಗ ಆ ಮನುಷ್ಯನ ಚಿಂತನೆಗೆ ಅರ್ಥಪೂರ್ಣ ಸ್ವರೂಪವಿರುತ್ತೆ ಅನ್ನಿಸುತ್ತೆ. ಆದ್ದರಿಂದಲೇ ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದಂತೆ ಮಾತಾಡುವಾಗಲೆಲ್ಲ ಜಿ.ಎಸ್.ಎಸ್. ಮನುಷ್ಯರಾಗುತ್ತಾರೆ. ಹಾಗೆ ನೋಡಿದರೆ ಇವರ ಮನುಷ್ಯತ್ವ ನನಗೆ ಹೆಚ್ಚು ಅರ್ಥವಾಗಿದ್ದು ಶೂದ್ರದ ಮೂಲಕ.

ದಯವಿಟ್ಟು ಕ್ಷಮಿಸಿ. ಬರೆಯಬೇಕಾಗಿದ್ದ ನೂರಾರು ಮಾತುಗಳನ್ನು ತಡೆದು ಈ ಕಾಲಂನ್ನು ಮುಗಿಸಲು ಪ್ರಯತ್ನಿಸುತ್ತಿರುವೆ. ಆದರೆ ಮುಗಿಸುವ ಮುನ್ನ ನಮ್ಮ ಪ್ರೀತಿಯ ಮೇಷ್ಟ್ರಾಗಿದ್ದ ಜಿ.ಎಸ್.ಎಸ್. ಲಕ್ಷ್ಮೀನಾರಾಯಣ ಭಟ್ಟ ಹಾಗೂ ಪುರುಳ ಸಿದ್ಧಪ್ಪನವರನ್ನು 'ಜ್ಞಾನ ಭಾರತಿ'ಯಿಂದ ಹಳೆಯ ಪ್ರಸನ್ನ ಕುಮಾರ್ ಬ್ಲಾಕಿಗೆ ಒಂದೆರಡು ಘಂಟೆ ಕರೆತಂದಿದ್ದೆವು. ಜಿ.ಎಸ್.ಎಸ್.ರವರಿಗೆ ಅರವತ್ತು ವರ್ಷ ಆದ ಸವಿನೆನಪಿಗೆ ಒಟ್ಟಿಗೆ ನಮ್ಮ ಗೆಳೆಯರ ಗುಂಪು ಊಟ ಮಾಡುವ ಅನ್ನಿಸಿತು. ಒಂದು ನೋವಿನ ಸಂಗತಿಯೆಂದರೆ ನಾವು ಆಡಿ ನಲಿದಾಡಿದ್ದ ಹುಲ್ಲಿನ ಮೇಲೆ ಕೂರಲಾಗಲಿಲ್ಲ ಸಂಜೆಯ ತೆಳುವಾದ ಮಳೆಗೆ ಹುಲ್ಲು ತೇವವಾಗಿತ್ತು. ಸ್ವಲ್ಪ ಕತ್ತಲಾಗಿದ್ದರೂ ಗುಲ್ ಮಹರ್‌ನ ಮರ ಗೊಂಚಲು ಗೊಂಚಲು ಹೂವು ತುಂಬಿಕೊಂಡಿದ್ದರೂ ಅದರ ಕೆಳಗೆ ನಲಿದಾಡುವ ಹುಡುಗಿಯರಿರಲಿಲ್ಲ. ನಾವು ಮರಕೋತಿ ಆಟವಾಡಿದ್ದ ಹೊಂಗೆ ಮರ ನಾಪತ್ತೆಯಾಗಿತ್ತು.

ಈಗ ಸೆಂಟ್ರಲ್ ಕಾಲೇಜ್ ಹಳೆಯ ವೈಭವವನ್ನು ಕಳೆದುಕೊಂಡಿದೆ. ನಮ್ಮ ಚರ್ಚೆಯ ಅನುಭವ ಮಂಟಪವಾಗಿದ್ದ ಪಿ. ಪಿ. ಕಟ್ಟೆಯ ಪಳೆಯುಳಿಕೆಯೂ ಉಳಿದಿಲ್ಲ. ಜಿ.ಎಸ್.ಎಸ್. ರೀತಿಯ ಹಿರಿಯ ಪ್ರಾಧ್ಯಾಪಕರು ಆಗಾಗ ಕೊಡೆಹಿಡಿದು ಓಡಾಡುವುದನ್ನು ಕಂಡು ವ್ಯಥೆಯಾಗುತ್ತೆ. ಹಾಗೆಯೇ ತಮ್ಮ ವಿದ್ಯಾರ್ಥಿ–ವಿದ್ಯಾರ್ಥಿನಿಯರು ಬೆಳೆಸಿದ ಹುಲ್ಲಿನ ಪಾರ್ಕಿನಲ್ಲಿ ಮೈ ಮಾರಲು ಕಾದು ಕೂತ ಹೆಂಗಸರನ್ನು ಕಂಡು ವೇದನೆಯನ್ನು ವ್ಯಕ್ತಪಡಿಸುವವರೂ ಇದ್ದಾರೆ. ಆದರೆ ನನ್ನ ಪ್ರೀತಿಯ ಜಿ.ಎಸ್.ಎಸ್, ರವರಿಗೆ ನೂರಾರು ಜನ ಸಾಹಿತ್ಯದ ಸ್ನೇಹಿತರು ಇರುವುದರಿಂದ ಕೈಯಲ್ಲಿರುವ ಕೊಡೆಯನ್ನು ಬಿಚ್ಚದೆ ಅದೇ ಗಿಡ-ಮರ-ಬಳ್ಳಿ-ಕಾವ್ಯರಚನೆಸಾಹಿತ್ಯ ಇತ್ಯಾದಿ ರಕ್ಷಿಸುವ ಕೊಡೆಗಳಾಗಲಿ.

26–6–86 —ಶೂದ್ರ ಶ್ರೀನಿವಾಸ್

**ರುಜುವಾತು :** ಸಾಕ್ಷಿ, ಸಂಕ್ರಮಣ ಹಾಗೂ ಅಂಕಣ ಕನ್ನಡ ಸಾಹಿತ್ಯಕ ಪತ್ರಿಕೆಗಳಾಗಿ ಮಾಡಿರುವ ಕೆಲಸ ಅಪಾರ. ಈಗ ಸಾಕ್ಷಿ ನಿಂತಿದ್ದರೂ, ಅದರ ಸ್ಥಾನದಲ್ಲಿ ಅತ್ಯಂತ ಅರ್ಥಪೂರ್ಣ ಕೆಲಸಮಾಡುತ್ತಿರುವ 'ರುಜುವಾತು' (ತ್ರೈಮಾಸಿಕ) ನಮ್ಮ ಸಾಂಸ್ಕೃತಿಕ ಸಂಬಂಧಗಳು ಗಟ್ಟಿಕೊಳ್ಳುವಲ್ಲಿ ನಾನಾರೀತಿಯ ಯೋಜನೆಗಳನ್ನು ಹಾಕಿಕೊಂಡಿದೆ. ಈ ದಿಕ್ಕಿನಲ್ಲಿ ಈಗಾಗಲೇ ನಮ್ಮ ಸಂದರ್ಭದ ಪ್ರಜ್ಞಾವಂತ ವಿಮರ್ಶಕ ಹಾಗೂ ಚಿಂತಕ ಜಿ. ರಾಜಶೇಖರರವರಿಗೆ 'ಕರ್ನಾಟಕದಲ್ಲಿ ಹಿಂದೂ-ಮುಸ್ಲಿಂ ಬಾಂಧವ್ಯಕ್ಕೆ ಸಂಬಂಧಿಸಿದ ಅಧ್ಯಯನಕ್ಕೆ ಫೆಲೋಶಿಪ್ ಕೊಟ್ಟು ಸಹಕರಿಸಿದೆ. ಇನ್ನೂ ನಾನಾ ಯೋಜನೆಗಳನ್ನು ತಲೆಯಲ್ಲಿ ತುಂಬಿಕೊಂಡಿರುವ ಈ ಪತ್ರಿಕೆಯ ಬಳಗದ ಯು. ಆರ್. ಅನಂತಮೂರ್ತಿ, ಚಿ. ಸರ್ವಮಂಗಳ, ಪಟ್ಟಾಭಿರಾಮ ಸೋಮಯಾಜಿ, ಎನ್. ವಿದ್ಯಾಶಂಕರ್, ಎ.ಆರ್. ನಾಗಭೂಷಣ ಹಾಗೂ ಮೀನಾ ಮೈಸೂರ್‌ರವರಿಗೆ 'ಶೂದ್ರ' ಅಭಿನಂದನೆ ಸಲ್ಲಿಸುತ್ತೆ.

## ಭೀಕರ ಬರಗಾಲ ಎದುರಿಸಲು ವ್ಯಾಪಕ ಕಾರ್ಯಕ್ರಮ
## ಉದ್ಯೋಗ ಸೃಷ್ಟಿಯೊಂದಿಗೇ ಗ್ರಾಮೀಣ ಆಸ್ತಿ ನಿರ್ಮಾಣ

ಕರ್ನಾಟಕ ಸಮೃದ್ಧಿಯ ನಾಡು. ಅದು ಇಂದು ತಡೆಯಲಾಗದ, ಮರುಕಳಿಸಿದ ಭೀಕರ ಕ್ಷಾಮದಿಂದ ತತ್ತರಿಸುತ್ತಿದೆ. ನೈರುತ್ಯ ಹಾಗೂ ಈಶಾನ್ಯ ಮಾರುತಗಳ ಸತತ ವೈಫಲ್ಯದಿಂದಾಗಿ, ಈ ಪುಣ್ಯಭೂಮಿ ಕಳೆದ ನಾಲ್ಕು ವರ್ಷಗಳಿಂದ ವಿಪತ್ತಿನ ದವಡೆಯಲ್ಲಿ ಸಿಲುಕಿದೆ. ಇಡೀ ಗ್ರಾಮೀಣ ಬದುಕಿನ ಜೀವನಾಡಿಯನ್ನೇ ತಲ್ಲಣಗೊಳಿಸಿದೆ. ಹೆಚ್ಚೂ ಕಡಿಮೆ ಇಡೀ ರಾಜ್ಯ ಇದರ ಹೊಡೆತಕ್ಕೆ ಸಿಲುಕಿದೆ. ರಾಜ್ಯದ 175 ತಾಲ್ಲೂಕುಗಳಲ್ಲಿ 148 ತಾಲ್ಲೂಕುಗಳು, 27,028 ಹಳ್ಳಿಗಳ ಪೈಕಿ 20,496 ಹಳ್ಳಿಗಳು, 371 ಲಕ್ಷದಲ್ಲಿ 220 ಲಕ್ಷ ಜನತೆ, 150 ಲಕ್ಷದಲ್ಲಿ 110 ಲಕ್ಷ ಜಾನುವಾರು ಸಹಿತ ಪ್ರಕೃತಿಯ ವಿಕೋಪಕ್ಕೆ ಸಿಲುಕಿವೆ. ಬೇಸಾಯ ಕ್ಷೇತ್ರದಲ್ಲಿ ಶೇ : 47 ರಷ್ಟು ಮುಂಗಾರು ಬೆಳೆಯ ಪ್ರದೇಶಗಳು ತೊಂದರೆಗೆ ಈಡಾಗಿವೆ ; ಇದರ ಫಲವಾಗಿ ಆಹಾರದ ಉತ್ಪಾದನೆಯಲ್ಲಿ ಶೇ : 50ರಷ್ಟು ನಷ್ಟವುಂಟಾಗಿದೆ.

**ಕೊಳವೆ ಬಾವಿಗಳು :—**

ಹಳ್ಳಿಗಳಲ್ಲಿ ಕೊಳವೆ ಬಾವಿಗಳನ್ನು ತೋಡುವ ಕೆಲಸ ಶೀಘ್ರ ಗತಿಯಲ್ಲಿ ಸಾಗಿದೆ. ಕಳೆದ ನಾಲ್ಕು ವರ್ಷಗಳಲ್ಲಿ 41,000ಕ್ಕೂ ಹೆಚ್ಚು ಕೊಳವೆ ಬಾವಿಗಳನ್ನು ನಿರ್ಮಿಸಲಾಗಿದೆ. ಇದರಿಂದಾಗಿ, ಈವರೆಗೆ ರಾಜ್ಯದಲ್ಲಿ ಈಗ 92,500 ಕೊಳವೆ ಬಾವಿಗಳನ್ನು ನಿರ್ಮಿಸಿದಂತಾಗಿದೆ.

**ಶಾಶ್ವತ ಆಸ್ತಿ ಮತ್ತು ಗ್ರಾಮೀಣ ಉದ್ಯೋಗ :—**

1985-86ರಲ್ಲೇ 870 ಕ್ಕೂ ಹೆಚ್ಚು ನೀರಾವರಿ ನಾಲೆಗಳನ್ನು ತೋಡಲಾಗಿದೆ. ಅದರೊಂದಿಗೆ 1.500 ಹಳೆಯ ಕೆರೆಗಳ ದುರಸ್ತಿ ಹಾಗೂ 130 ಹೊಸ ಕೆರೆಗಳ ನಿರ್ಮಾಣ ಮಾಡಲಾಗಿದೆ. ಕರ್ನಾಟಕ ಹಳ್ಳಿಗಳಿಗೆ ಇದು ಅತ್ಯಾವಶ್ಯಕ ಕೊಡುಗೆ.

**ತುರ್ತು ಪರಿಹಾರ ಕ್ರಮಗಳು ಕುಡಿಯುವ ನೀರು, ಆಹಾರ ಧಾನ್ಯ, ಮೇವು:–**

ದೈನಂದಿನ ಅವಶ್ಯಕತೆಗಳಾದ ಆಹಾರ ಧಾನ್ಯ, ಕುಡಿಯುವ ನೀರು, ಮತ್ತು ಮೇವು ಪೂರೈಕೆಗೆ ಹೆಚ್ಚಿನ ಗಮನ ನೀಡಲಾಗುತ್ತಿದೆ. ಪಂಜಾಬ್, ಹರ್ಯಾಣ ಮತ್ತು ಉತ್ತರಪ್ರದೇಶಗಳಿಂದ ಗೋಧಿ ಹುಲ್ಲು ಮತ್ತು ಭತ್ತದಹೊಟ್ಟಿನ ಸಂಗ್ರಹ.

**ಕ್ಷಾಮದ ವಿರುದ್ಧ ಸರ್ಕಾರದ ಅವಿರತ ಹೋರಾಟ ಮುಂದುವರೆದಿದೆ... ಎರಡು ಕ್ಷೇತ್ರಗಳಲ್ಲಿ ತುರ್ತು ಪರಿಹಾರ ಉದ್ಯೋಗ ಸೃಷ್ಟಿ ಹಾಗೂ ಆಸ್ತಿ ನಿರ್ಮಾಣ**

**"ಕರ್ನಾಟಕ ವಾರ್ತೆ"**

ಲಂಕೇಶ್‌ರವರ 51 ನೆಯ ವರ್ಷದ ನೆನಪಿಗಾಗಿ

# 'ಶೂದ್ರ'ದ ಆಶ್ರಯದಲ್ಲಿ ಲಂಕೇಶ್‌ರವರ ಸಾಹಿತ್ಯದ ಬಗ್ಗೆ

# ವಿಚಾರ ಸಂಕಿರಣ

ಜುಲೈ 13 ರಂದು ಭಾನುವಾರ

---

ಒಟ್ಟು ಎರಡು ಗೋಷ್ಠಿಗಳು :

ಪ್ರಬಂಧ ಮಂಡಿಸುವವರು : ಡಾ॥ ಕೆ. ವಿ. ನಾರಾಯಣ—ಟಿ. ಪಿ. ಅಶೋಕ ರಾಜೇಂದ್ರ ಚೆನ್ನಿ—ಎಚ್. ಎಸ್. ರಾಘವೇಂದ್ರರಾವ್—ಡಾ॥ ಕೆ. ಮರುಳ ಸಿದ್ದಪ್ಪ—ನರಹಳ್ಳಿ ಬಾಲಸುಬ್ರಮಣ್ಯ –ಡಾ॥ ಎಸ್. ಚಂದ್ರಶೇಖರ್ ಕೆ. ಎಂ. ಕೋದಂಡರಾಂ—ಜಿ. ಎಸ್. ಆಮೂರ್—ಓ. ಎಲ್. ನಾಗಭೂಷಣಸ್ವಾಮಿ ಮುಂತಾದವರು.

ಸಂಜೆ : ಡಾ॥ ಯು. ಆರ್. ಅನಂತಮೂರ್ತಿ—ಅಬ್ದುಲ್ ನಸೀರ್‌ಸಾಬ್ ಮತ್ತು ಪಿ. ಲಂಕೇಶ್‌ರವರು ಭಾಗವಹಿಸುವರು.

ಸ್ಥಳ : ಸೆಂಟ್ರಲ್ ಕಾಲೇಜ್ ಸೆನೆಟ್ ಭವನ.

ಕಾಲ : ಬೆಳಿಗ್ಗೆ 10 ಘಂಟೆಯಿಂದ ಸಂಜೆ 7 ಘಂಟೆಯವರೆವಿಗೆ.

ಬನ್ನಿ ಚರ್ಚೆಯಲ್ಲಿ ಭಾಗವಹಿಸಿ.

---

ಶೂದ್ರದ 'ಅಂಕಣ್ಣ' ಕಾವ್ಯ ಸ್ಪರ್ಧೆಯ ಫಲಿತಾಂಶ

ಮೊದಲನೆಯ ಸ್ಥಾನ : ಸ್ವಾಮಿನಾಥ—ಗೌನಿಪಲ್ಲಿ

ಎರಡನೆಯ ಸ್ಥಾನ : ಟಿ. ಜಿ. ಭಟ್ಟ—ಹಾಸಣಗಿ—ಉ. ಕ

ಮೂರನೆಯ ಸ್ಥಾನ : ವಿಜಯಶ್ರೀ ಸಬರದ—ಬೀದರ

ತೀರ್ಪುಗಾರರು : ಎಚ್. ಎಸ್. ವೆಂಕಟೇಶಮೂರ್ತಿ

F/NP/KRNU/72 No. M (2) PRB 210/73/74

Shoodra Kannada Monthly



ಒಂದು ಸಂಸ್ಕೃತಿಯ ಹಿರಿಯ ವ್ಯಕ್ತಿತ್ವವಾಗಿ ಬೆಳೆದ 'ಮಾಸ್ತಿ'ಯವರ 95 ವರ್ಷಗಳ ಜೀವನ ದೃಷ್ಟಿಯನ್ನು ಹೇಗೆ ವರ್ಣಿಸಬೇಕೋ ಗೊತ್ತಿಲ್ಲ. ಆದರೆ ಅವರು ತಮ್ಮ ಶ್ರೀಮಂತ ಅನುಭವದ ಮೂಲಕ ವೈವಿಧ್ಯಪೂರ್ಣ 'ದೃಷ್ಟಿ'ಯನ್ನು ನಮ್ಮ ಮುಂದೆ ಇಟ್ಟು ಹೋಗಿದ್ದಾರೆ. ನಮ್ಮ ಕಾಲದ ಮೇರು ಪರ್ವತ ಪಕ್ಕಕ್ಕೆ ಸರಿದಿದೆ, ಎಂದುಕೊಂಡರೂ ಅವರ ಅಪಾರ ಸಾಹಿತ್ಯ ನಮ್ಮ ಮುಂದಿದೆ. ನನ್ನ ಮಟ್ಟಿಗೆ ವಿಚಿತ್ರ ಅನುಭವವನ್ನು ಕೊಟ್ಟರು ಮಾಸ್ತಿಯವರು. ಕನಸಿಗೊಂದು ಕಣ್ಣಲ್ಲಿ ಎರಡು ಬಾರಿ ಬರೆದ ಮೇಲೆ ಮತ್ತೊಮ್ಮೆ ಆತ್ಮೀಯ ಸಂಪಾದಕೀಯವನ್ನು ಬರೆಯಲಾರದವನಾಗಿದ್ದೇನೆ. ಕ್ಷಮಿಸಿ. ಹೇಳಿದಂತೆ ಬದುಕಿದ ಮಾಸ್ತಿ ನಾನಾ ವಿಷಯಗಳಲ್ಲಿ ಸವಾಲಾದವರು. ಅವರ ಚೇತನ ನಮಗೆ ಸದಾ ಸ್ಫೂರ್ತಿದಾಯಕವಾಗಿರಲಿ.

—ಸಂ.

ಮುಂದಿನ ಸಂಚಿಕೆಯಲ್ಲಿ :

ರಾಜೇಂದ್ರ ಜೆನ್ನಿ
ಪ್ರಸನ್ನ
ಬಿದಿರಹಳ್ಳಿ ನರಸಿಂಹಮೂರ್ತಿ
ಎಸ್. ಮಾಲತಿ
ಸಂಧ್ಯಾ ಬಂದಗದ್ದೆ
ಸ್ವಾಮಿನಾಥ
ಟಿ. ಜಿ. ಭಟ್ಟ
ವಿಜಯಶ್ರೀ ಸಬರದ
ಓ.ಎಲ್. ನಾಗಭೂಷಣ ಸ್ವಾಮಿ

Printed at : Shalivahan Printers, Bangalore - 53
Editor & Publisher : M. SRINIVAS